ಶ್ರೀ

ಭ್ರಮರಾಂಬಿಕಾ ಸಮೇತ ಮಲ್ಲಿಕಾರ್ಜುನ ಸ್ವಾಮಿನೇನಮಃ



ಸಂಪೂರ್ಣ

# ಶ್ರೀಶೈಲ ಕ್ಷೇತ್ರ ಚರಿತ್ರೆ

.... ಮತ್ತು ....

## ಮಹಾನಂಧಿ ಕ್ಷೇತ್ರ ಮಹಿಮೆ



ಲೇಖಕರು :

" ಆಸ್ಥಾನ ಪಂಡಿತ ವಿದ್ವಾನ್ "

**K. M. K.** ಕರಿಬಸವ ಶಾಸ್ತ್ರಿಗಳು,

ಬಳ್ಳಾರಿ.



ಪ್ರಕಾಶಕರು :

ಪಿ. ಸಿ. ಶಾಬಾದಿಮಠ

ಮುದ್ರಕರು, ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು,

ಗದಗ.

ಬೆಲೆ : ೩—೦೦

# ಲೇಖಕರ ಮೊದಲ ನುಡಿ

ಓದುಗರೇ, ಭಾರತದ ಯಾವತ್ತೂ ಶ್ರೀಶೈಲ ಮಲ್ಲಿಕಾರ್ಜುನ ಭಕ್ತರೇ, ಈ ಶ್ರೀಶೈಲ ಚರಿತ್ರೆಯು ಅಚ್ಚಕನ್ನಡ ಸರಳಭಾಷೆಯಲ್ಲಿ ನೂತನ ಯಾವತ್ತೂ ವಿಷಯುಗಳಿಂದ ಆಧ್ಯಂತ ಕ್ಷೇತ್ರ, ದೇವಸ್ಥಾನ, ಗವಿ ಗಂವ್ಹರ, ಮಾರ್ಗ, ಪರ್ವತ, ಸರೋವರ. ಕೊಳ್ಳ, ಹೊಳೆಗಳ ಸವಿಸ್ತಾರ ವರ್ಣನೆಗಳಿಂದ ಸಾಧ್ಯಂತ ವಿಷಯ ಈ ಪುಸ್ತಕದಲ್ಲಿ ಅಡಕವಾಗಿದೆ. ಈ ಕ್ಷೇತ್ರ ದರ್ಶನಕ್ಕಾಗಿ ಬರತಕ್ಕ ಯಾವತ್ತೂ ಭಕ್ತಮಹಾಶಯರಿಗೆ ಈ ಗ್ರಂಥದಿಂದ ಸರ್ವವಿಷಯ ಮನವರಿಕೆಯಾಗುವದಲ್ಲದೆ ಪರಮಾತ್ಮನ ದರ್ಶನ ಲಾಭದಿಂದ ಸರ್ವರೂ ಮೋಕ್ಷಕಾರಿಗಳಾಗಲಿಕ್ಕೆ ಯಾವ ಅಭ್ಯಂತರವೂ ಇಲ್ಲ. ಈ ಶ್ರೀಶೈಲ ಪೂಜ್ಯ ಗ್ರಂಥವನ್ನು ಓದುವರಿಂದಲೂ, ಕೇಳುವದರಿಂದಲೂ ಅನೇಕ ಜನ್ಮದ ಪಾಪಗಳೂ ನಾಶವಾಗುತ್ತವೆಂದು ವೇದಗಳು ಸಾರುತ್ತವೆ. ಆದ್ದರಿಂದ ಸರ್ವರೂ ಈ ಪೂಜ್ಯ ಗ್ರಂಥವನ್ನು ಸಂಗ್ರಹಿಸಿ ಧನ್ಯರಾದರೆ ಲೇಖಕರ ಶ್ರಮವೂ ಸಾರ್ಥಕವಾಗುತ್ತದೆ. ಈ ಚಿಕ್ಕ ಪೂಜ್ಯ ಪುಸ್ತಕದಲ್ಲಿ ಮುದ್ರಣಾಕ್ಷರ ದೋಷಗಳಿದ್ದಲ್ಲಿ ಅದನ್ನು ಗ್ರಾಹಕರು ತಿಳಿಸಿದಲ್ಲಿ ಅದಕ್ಕೆ ಮಾನ್ಯಮಾಡಿ ಮುಂದಿನ ಮುದ್ರಣಗಳಲ್ಲಿ ಸರಿಪಡಿಸಿಕೊಳ್ಳುತ್ತೇವೆ. ಸರ್ವರೂ ಈ ಚಿಕ್ಕ ಗ್ರಂಥಕ್ಕೆ ಪ್ರೋತ್ಸಾಹ ಕೊಡಬೇಕಾಗಿ ಲೇಖಕನ ಆಶೆಯು.



ಲೇಖಕರು :
" ಆಸ್ಥಾನ ಪಂಡಿತ ವಿದ್ವಾನ್ "
ಕೆ. ಎಮ್. ಕೆ. ಕರಿಬಸವ ಶಾಸ್ತ್ರಿಗಳು

# ಅನುಕ್ರಮಣಿಕೆ

# ಶ್ರೀಶೈಲಕ್ಕೆ

■ ರಾಜಧಾನಿ
⊙ ಜಿಲ್ಲೆಯ ಮುಖ್ಯಸ್ಥಳ
— ರಸ್ತೆ
┼┼┼┼ ರೈಲು ಮಾರ್ಗ
〰 ನದಿ



ಶ್ರೀ

ಭ್ರಮರಾಂಬಿಕಾ ಸಮೇತ ಮಲ್ಲಿಕಾರ್ಜುನ ಸ್ವಾಮಿನೇನಮಃ

ಸಂಪೂರ್ಣ

# ಶ್ರೀಶೈಲ ಕ್ಷೇತ್ರ ದರ್ಶನ

※*‸*※

ಶ್ಲೋ॥ ಸಂಧ್ಯಾರಂಭ ವಿಜೃಂಭಿತಂ ಶೃತಿಶಿರಸ್ಥಾನಾಂತರಾಧಿಷ್ಠಿತಂ
ಸಪ್ರೇಮ ಭ್ರಮರಾಭಿರಾಮ ಮಸಕೃಸ್ಸದ್ವಾಸನಾಶೋಭಿತಂ
ಭೋಗೀಂದ್ರಾಭರಣಂ ಸಮಸ್ತಸುಮನಃ ಪೂಜ್ಯಂ ಗುಣಾವಿಷ್ಕೃತಂ
ಸೇವೇ ಶ್ರೀಗಿರಿ ಮಲ್ಲಿಕಾರ್ಜುನ ಮಹಾಲಿಂಗಂ ಶಿವಾಲಿಂಗಿತಂ ॥

ಹೇ ಭ್ರಮರಾಂಬಿಕಾ

ಶ್ಲೋ॥ ಶಿವಶ್ಯಕ್ತ್ಯಾಯುಕ್ತೋಯದಿಭವತಿ ಶಕ್ತಃ ಪ್ರಭವಿತುಂ
ನಚೇದೇವಂ ದೇವೊ ನಖಲುಕುಶಲಃ ಸ್ಪಂದಿತುಮಪಿ
ಆತಸ್ತ್ವಾಮಾರಾಧ್ಯಾಂ ಹರಿಹರವಿರಿಂಚಾದಿಭಿರಪಿ
ಪ್ರಣ ತುಂಸ್ತೋತುಂವಾಕಥಮಕೃತಪುಣ್ಯಃ ಪ್ರಭವತಿ ॥

ಹೀಗೆ ಸಮಸ್ತ ಜಗತ್ತಿಗೆ ಮಾತಾಪಿತೃಗಳಾದ ಪಾರ್ವತಿ—ಪರಮೇಶ್ವರರನ್ನು ವಂದಿಸಿ ಶ್ರೀಶೈಲ ಕ್ಷೇತ್ರ ಚರಿತ್ರೆಯನ್ನು ಬರೆಯಲುದ್ಯಮಿಸಿರುವೆನು.

— ಶ್ರೀಶೈಲ —

ಭೂಮಂಡಲದಲ್ಲಿ ವಿರಾಜಿಸುತ್ತಿರುವ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಶ್ರೀಶೈಲ ಮಲ್ಲಿಕಾರ್ಜುನ ಲಿಂಗವು ಒಂದಾಗಿರುವದು. ಈ ಕ್ಷೇತ್ರ ಪ್ರಭಾವವು

ಅತಿಶಯವಾದುದಾಗಿರುವದು. ಇಂತಹ ಕ್ಷೇತ್ರವು ಭರತಖಂಡದಲ್ಲಿ ಮೆರೆ ಯುವ ಆಂಧ್ರದೇಶದ ಕರ್ನೂಲು ಜಿಲ್ಲೆಯ ನಂದಿಕೊಟಕೂರು ತಾಲೂಕಿನಲ್ಲಿ ನಲ್ಲಮಲೆಬೆಟ್ಟಗಳ ಮೇಲೆ ಬೆಳಗುತ್ತಲಿದೆ. ಇದು ಶೈವಕ್ಷೇತ್ರವು ಇದಕ್ಕೆ ಶ್ರೀಶೈಲವೆಂತಲೂ, ಶ್ರೀಗಿರಿಯೆಂತಲೂ, ಶ್ರೀ ಪರ್ವತವೆಂತಲೂ, ಶ್ರೀನಗರ ವೆಂತಲೂ ಪರಂಪರೆಯಾಗಿ ಬಂದ ನಾಮಧೇಯಗಳಿರುವವು. ಈ ಕ್ಷೇತ್ರವು ಸಮುದ್ರದ ಮಟ್ಟಕ್ಕೆ ೧೫೦೦ ಅಡಿಗಳ ಎತ್ತರದಲ್ಲಿ ದುರ್ಗಮಗಳಾದ ಪರ್ವತ ಗಳ ಮಧ್ಯದಲ್ಲಿರುವದು. ಇಂತಿಷ್ಟು ದುರ್ಗಮವಾಗಿದ್ದರೂ ಭರತಖಂಡದ ನಾಲ್ಕೂ ದಿಕ್ಕುಗಳಿಂದಲೂ ದರ್ಶನಾಪೇಕ್ಷಿಗಳಾಗಿ ಭಕ್ತರು ಬಂದು ಮಹತ್ತರ ವಾದ ಭಕ್ತಿಯಿಂದ ದರ್ಶನಮಾಡಿಕೊಂಡು ಕೃತಾರ್ಥರಾಗುತ್ತಿರುವರು. ವಿಶೇ ಷವಾಗಿ ಆಂಧ್ರದೇಶಸ್ಥರು, ಕನ್ನಡನಾಡಿನವರು, ಮಹಾಷ್ಟ್ರರು, ತಮಿಳರು ಪ್ರತಿವರ್ಷವೂ ಶಿವರಾತ್ರಿ ಮುಂತಾದ ಉತ್ಸವ ದಿನಗಳಲ್ಲಿ ಈ ಕ್ಷೇತ್ರಕ್ಕೆ ಬರು ತ್ತಿರುವದು ಅನುಚಾನವಾಗಿ ನಡೆದಿರುವದು.

ಕೊಲ್ಲಾಪೂರದಲ್ಲಿ ಮಹಾಲಕ್ಷ್ಮಿ, ಜಾಲಂಧರಲ್ಲಿ ಮಹಾದೇವಿ, ಕನ್ಯಾಕುಬ್ಜೆಯಲ್ಲಿ ಕುಬ್ಜೆ, ಸಿಂಹಳದಲ್ಲಿ ಸಿಂಹಿಕೆ, ಚಕ್ರವಾಸಿಯಲ್ಲಿ ಮಣಿ ಕಣಿಂಕೇಶ್ವರಿ, ಪೂರ್ಣಕ್ಷೇತ್ರದಲ್ಲಿ ಪೂರ್ಣಿಕಾದೇವಿ; ಪರ್ವತದಲ್ಲಿ ಪಾರ್ವತಿ. ವಿಂಧ್ಯಾದ್ರಿಯಲ್ಲಿ ವಿಂಧ್ಯವಾಸಿನಿ, ಮಹಾಕಾಲಕ್ಷೇತ್ರದಲ್ಲಿ ಮಹಾಕಾಲೇಶ್ವರಿ, ಯೋಗಿನೀಪುರದಲ್ಲಿ ಯೋಗಾವತಿ, ಹಿಮಾಚಲದಲ್ಲಿ ಹೈಮವತಿ. ಶ್ವೇತದ್ವೀಪ ದಲ್ಲಿ ಪದ್ಮವಾಸಿನಿ, ಸುಮೇರುವಿನಲ್ಲಿ ಸುಪ್ರಭೆ, ಶ್ರೀಶೈಲದಲ್ಲಿ ಭ್ರಮರಾಂಬಿಕೆ, ಕಾಶಿಯೊಳಗನ್ನಪೂರ್ಣೆ, ಧರ್ಮಸ್ಥಳದಲ್ಲಿ ಕಾಳರಾತ್ರಿ, ಶೃಂಗಪುರದಲ್ಲಿ ಶಾರದೆ, ಲಂಬಿಕೆಯಲ್ಲಿ ಲಲಿತಯೆಂಬ ಅಷ್ಟಾದಶ ಶಕ್ತಿಗಳಲ್ಲಿ ಪ್ರಧಾನವಾದ ಭ್ರಾಮರೀ ಶಕ್ತಿ ಈ ಕ್ಷೇತ್ರದಲ್ಲಿ ಭ್ರಮರಾಂಬಾ ರೂಪದಿಂದ ಅವತರಿಸಿದಳು.

ಸಾಧಾರಣವಾಗಿ ಭಾರತ ದೇಶದಲ್ಲಿರುವ ಕ್ಷೇತ್ರಗಳಲ್ಲಿ ಯಾವದೋ ಒಂದು ದೇವತೆಯ ಹೆಸರು ಪ್ರಾಧಾನ್ಯವಾಗಿರುವದು, ಮಿಕ್ಕ ದೇವತೆಗಳಿಗೆ ಹೆಚ್ಚು ಪ್ರಾಧಾನ್ಯತೆಯಿರುವದಿಲ್ಲ. ಶ್ರೀಶೈಲ ಕ್ಷೇತ್ರದಲ್ಲಿ ಕ್ಷೇತ್ರನಾಮಕ್ಕನುಗು ಣವಾಗಿ ಶ್ರೀ ಮಲ್ಲಿಕಾರ್ಜುನ ಲಿಂಗಕ್ಕೇನೇ ಪ್ರಾಧಾನ್ಯತೆ ಇದ್ದಂತೆ ಕಂಡು ಬಂದರೂ, ಇಲ್ಲಿ ಶ್ರೀ ಭ್ರಮರಾಂಬಾ ದೇವಿಗೂ ಪ್ರಾಧಾನ್ಯತೆ ಇರುವದು.

ಇಲ್ಲಿ ದೇವರಿಗೆಷ್ಟು ಪ್ರಾಧಾನ್ಯವೋ ದೇವಿಗೂ ಅಷ್ಟು ಪ್ರಾಧಾನ್ಯವಿರುವದು ಈರ್ವರಿಗೂ ಸಮತೋಲವಾದ ವರ್ಚಸ್ಸಿರುವದು.

ಶೈವಕ್ಷೇತ್ರಗಳಲ್ಲಿ ಶ್ರೀಶೈಲ ಕ್ಷೇತ್ರಕ್ಕೇನೇ ಅತ್ಯಂತ ಪ್ರಾಧಾನ್ಯತೆಯಿರುವದು. ಕಾಶೀಕ್ಷೇತ್ರದಲ್ಲಿ ಮರಣವಾದರೆ ಮುಕ್ತಿಯಾಗುವದೆಂದು ರೂಢಿಯಿರುವದು. ಅರುಣಾಚಲ ಕ್ಷೇತ್ರದಲ್ಲಿ ಸ್ಮರಣಮಾತ್ರದಿಂದ ಮೋಕ್ಷವು ಲಭಿಸುವದು. ಶ್ರೀಶೈಲದಲ್ಲಿ ಶಿಖರದರ್ಶನ ಮಾತ್ರದಿಂದಲೇ ಮೋಕ್ಷವು ಲಭಿಸುವದೆಂತಲೂ ಪುನರ್ಜನ್ಮವಿಲ್ಲವೆಂತಲೂ ಪ್ರಸಿದ್ಧಿಯಾಗಿರುವದು. ಈ ಅಂಶವನ್ನೇ

ಶ್ಲೋ|| ಕಾಶ್ಯಾಂತೇ ಮರಣಾನ್ಮುಕ್ತಿಃ
ಸ್ಮರಣಾದರುಣಾಚಲೇ
ದರ್ಶನಾದೇವ ಶ್ರೀಶೈಲೇ
ಪುನರ್ಜನ್ಮನವಿದ್ಯತೇ ||

ಯೆಂಬ ಆರ್ಯೋಕ್ತಿಯು ಸ್ಪಷ್ಟವಾಗಿ ತಿಳಿಸುತ್ತಿರುವದು, ಮತ್ತು

ಶ್ಲೋ|| ಶ್ರೀಶೈಲ ಶಿಖರೇ ದೃಷ್ಟೇ
ಪುನರ್ಜನ್ಮನವಿದ್ಯತೆ

ಯೆಂಬ ಉಕ್ತಿಯು ಸುಪ್ರಸಿದ್ಧವಾಗಿರುವದು.

ಶ್ರೀಶೈಲ ಕ್ಷೇತ್ರವು ಯುಗಯುಗಾಂತರಗಳಿಂದಲೂ ಬಂದುದೆಂದು ಕೆಲವರ ವಿಶ್ವಾಸವು ಕೃತಯುಗದಲ್ಲಿ ಹಿರಣ್ಯಕಶ್ಯಪನು ಇಲ್ಲಿ ಮಲ್ಲಿಕಾರ್ಜುನನನ್ನು ಪೂಜಿಸಿದನೆಂತಲೂ, ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ತನ್ನ ಅರಣ್ಯವಾಸದ ಸಮಯದಲ್ಲಿ ಇಲ್ಲಿಗೆ ಬಂದು ಈ ಮಹಾಲಿಂಗವನ್ನು ಪೂಜಿಸಿದನೆಂತಲೂ, ದ್ವಾಪರಯುಗದಲ್ಲಿ ಪಂಚಪಾಂಡವರಿಲ್ಲಿಗೆ ಬಂದು ದರ್ಶನಲಾಭವನ್ನು ಪಡೆದರೆಂತಲೂ, ಕಲಿಯುಗದಲ್ಲಿ ಆಚಾರ್ಯರು, ನಾಗಾರ್ಜುನ ಮುಂತಾದವರು ಇಲ್ಲಿ ನಿವಾಸಮಾಡಿ; ಸ್ವಾಮಿಯ ಅನುಗ್ರಹಕ್ಕೆ ಪಾತ್ರರಾದರೆಂತಲೂ ಆರ್ಯರು ಹೇಳುತ್ತಿರುವರು.

ಮಾನವನ ಜೀವನಕ್ಕೆ ಶ್ರೀಶೈಲದಿಂದ ಹೆಚ್ಚು ಸಂಬಂಧವಿದ್ದಂತೆ ಕಂಡು ಬಂದಿದೆ. ಹೇಗೆಂದರೆ ! ಸನಾತನ ಧರ್ಮವನ್ನನುಸರಿಸುವ ಹೈಂದವರೆಲ್ಲರೂ

ನಿತ್ಯ ಪೂಜಾವಿಧಾನದಲ್ಲಿಯೂ, ಷೋಡಶ ಕರ್ಮಗಳ ಅನುಷ್ಠಾನದಲ್ಲಿಯೂ, ತರ್ಪಣಾದಿಗಳಲ್ಲಿಯೂ, ಗ್ರಹಣಕಾಲಗಳಲ್ಲಿಯೂ ಇನ್ನೂ ಅನೇಕ ಸಂದರ್ಭಗಳಲ್ಲಿ ಸಂಕಲ್ಪವನ್ನು ಮಾಡುವ ಕಾಲಕ್ಕೆ ಶ್ರೀಶೈಲವನ್ನು ಸ್ಮರಣಮಾಡಿಯೇ ತೀರಬೇಕು. ಸಂಕಲ್ಪ ಮಾಡುವವನು ತಾನು ಶ್ರೀಶೈಲಕ್ಕೆ ಯಾವ ದಿಕ್ಕಿನಲ್ಲಿರುವುದನ್ನು ಹೇಳಿಕೊಳ್ಳಬೇಕಾಗುವದು. ಆದುದರಿಂದ ಶ್ರೀಶೈಲ ಕ್ಷೇತ್ರಕ್ಕೆ ಎಂತಹ ಪ್ರಾಧಾನ್ಯತೆಯಿರುವದೋ ವಾಚಕರೇ ಯೋಚಿಸಿ ಮನನಮಾಡಿಕೊಳ್ಳಬೇಕು. ಇದಲ್ಲದೆ ಷಣ್ಮತಸ್ಥಾಪನಾಚಾರ್ಯರಾದ ಆದ್ಯ ಶಂಕರಾಚಾರ್ಯರು ಈ ಕ್ಷೇತ್ರದಲ್ಲಿದ್ದಂತೆಯೂ, ಅವರಿರುವ ಕಾಲಕ್ಕೆ ಒಂದು ವ.ಹತ್ತರವಾದ ಸಂಘಟನೆ ನಡೆಯಿತೆಂತಲೂ ಪರಂಪರೆಯಾಗಿಯೂ; ಕರ್ಣಾಕರ್ಣಿಯಾಗಿಯೂ ರೂಢಿಯಲ್ಲಿರುವ ವಿಷಯವಾಗಿರುವದು. ಅದೇನೆಂದರೆ ?

ಶ್ರೀಶೈಲ ಪ್ರಾಂತದಲ್ಲಿ 'ಕಾಪಾಲಿಕರೆಂಬ' ಒಂದು ವಿಧವಾದ ಶೈವರಿದ್ದರು ಅವರು ಕಪಾಲಿರೂಪದಿಂದಿದ್ದ ಶಿವನನ್ನು ಆರಾಧಿಸುತ್ತಿದ್ದರು. ನರಬಲಿಯು ಅವರ ಮುಖ್ಯ ಪೂಜೆಯಾಗಿದ್ದಿತು. ನರಬಲಿಯಿಂದಲೇ ಶಿವನು ತೃಪ್ತನಾಗಿ ತಮ್ಮನು ಕೃತಾರ್ಥನನ್ನಾಗಿ ಮಾಡುವನೆಂಬ ನಂಬುಗೆಯನ್ನು ಹೊಂದಿದ್ದರು. ಪ್ರತಿವರ್ಷ ತೇಜಸ್ವಿಯಾದ ಪುರುಷನೋರ್ವನನ್ನು ತಂದು ಶಿವನಿಗೆ ಬಲಿದಾನ ಮಾಡುತ್ತಿದ್ದರು. ಹೀಗೆ ಅನಂತಕಾಲ ನಡೆಯುತ್ತಿದ್ದಿತು. ಧರ್ಮಕರ್ಮ ಸಂಯೋಗದಿಂದ ಒಬ್ಬ ಕಾಪಾಲಿಕನಿಗೆ ತಪೋನಿಷ್ಠಾಗರಿಷ್ಠರಾಗಿದ್ದ ಶ್ರೀ ಶಂಕರಾಚಾರ್ಯರು ಕಣ್ಣಿಗೆ ಕಾಣಿಸಿಕೊಂಡರು. ಕಾಪಾಲಿಕನು ಆ ಮಹಾತ್ಮರು ಅತಿ ವರ್ಚಸ್ವಿಗಳು, ಯುವಕರು ತಪೋವಿಭೂತಿಯಿಂದ ಬೆಳಗುವವರು ಆಗಿದ್ದ ಆಚಾರ್ಯರನ್ನು ಕಂಡು ವಿಸ್ಮಿತನಾಗಿ ಇಂತಹ ಪುರುಷ ಶ್ರೇಷ್ಠನನ್ನು ಶಿವನಿಗೆ ಬಲಿಯನ್ನಿತ್ತರೆ ತನ್ನ ಇಷ್ಟಾರ್ಥವು ಕೈಗೂಡುವದೆಂದು ನಿರ್ಧರಿಸಿ ಅವರ ಸಮೀಪಕ್ಕೆ ಬಂದು ಧ್ಯಾನಮಗ್ನರಾಗಿದ್ದ ಶ್ರೀ ಶಂಕರಾಚಾರ್ಯರನ್ನು ಎಚ್ಚರಗೊಳಿಸಿದನು. ಶ್ರೀ ಶಂಕರರು ನನ್ನನ್ನು ಯೇತಕ್ಕೆ ಧ್ಯಾನದಿಂದ ಬಿಡುಗಡೆ ಮಾಡಿದೆ ? ನಿನ್ನ ಅಭಿಪ್ರಾಯವೇನು ? ಎಂದು ಕೇಳಲು ಆ ಕಾಪಾಲಿಕನು ವಿನಯದಿಂದ ಸ್ವಾಮಿೂ ? ನಾನು ಕಾಪಾಲಿಕನು ಕಪಾಲೇಶ್ವರನ ಆರಾಧನು. ಮಹಾ ತಪಸ್ವಿಯನ್ನಾಗಲಿ, ದೊಡ್ಡ ಭೂಪತಿಯನ್ನಾಗಲಿ ಕಪಾಲೇಶ್ವರನಿಗೆ ಬಲಿಯನ್ನಿತ್ತರೆ ಆ ದೇವಾಧಿದೇವನು ಪ್ರಸನ್ನನಾಗಿ ನನ್ನ ಅಭೀಷ್ಟಗಳನ್ನು ನೆರವೇರಿಸು

ವನು ಎಂದು ನುಡಿದನು. ಮತ್ತು ನೀನು ಮಹಾಯೋಗಿಯಾಗಿರುವನೆಂದು ನಂಬುಗೆಯಾದುದರಿಂದ ನಿನ್ನ ತಲೆಯನ್ನು ಕತ್ತರಿಸುವದಕ್ಕೆ ಸಮ್ಮತಿ ಕೊಡ ಬೇಕೆಂದು ಸ್ಪಷ್ಟವಾಗಿ ಹೇಳಿದನು. ಹೀಗೆ ನುಡಿದ ಕಾಪಾಲಿಕನ ವಾಕ್ಯಗ ಳಿಗೆ ಶ್ರೀಮದಾಚಾರ್ಯರು ಕ್ರುದ್ಧರಾಗದೆ ಕಿರುನಗೆ ನಗುತ್ತಾ ಹೇ ಕಾಪಾ ಲಿಕಾ ? ದೇವರಿಗೆ ನನ್ನನ್ನು ನೀನು ಬಲಿಯಾಗಿ ಕೊಡುವದಕ್ಕೆ ನನ್ನ ಅಭ್ಯಂತ ರವೇನೂ ಇಲ್ಲ, ನಾನು ಆತ್ಮ ರಕ್ಷಣೆಗಾಗಿ ಯಾವ ವಿಧವಾದ ಪ್ರಯತ್ನವನ್ನೂ ಮಾಡುವದಿಲ್ಲ. ಆದರೆ ನನ್ನ ಶಿಷ್ಯರಿಂದ ನಿನಗಾವ ವಿಧವಾದ ಭಾದೆಯುಂಟಾ ಗದಂತೆ ನೀನು ಆತ್ಮರಕ್ಷಣೆ ಮಾಡಿಕೊಳ್ಳಬೇಕು. ಆ ವಿಷಯದಲ್ಲಿ ನಿನಗೆ ಸಾಮರ್ಥ್ಯವಿದ್ದರೆ, ತಕ್ಕ ಪ್ರತಿಭಟನೆ ಮಾಡಿಕೊಳ್ಳುವ ಯೋಗ್ಯತೆಯಿದ್ದರೆ ನನ್ನನ್ನು ನೀನು ಅತ್ಯಗತ್ಯವಾಗಿ ಶಿವನಿಗೆ ಬಲಿದಾನ ಕೊಡಬಹುದು. ಇದಕ್ಕಣು ಮಾತ್ರವಾದರೂ ಸಂಶಯವಿಲ್ಲವೆಂದು ನುಡಿಯಲಾ ಮಾತುಗಳನ್ನು ಕೇಳಿದ ಕಾಪಾಲಿಕನು ಸಂತುಷ್ಟನಾಗಿ ನಾನು ನನ್ನ ಸಂರಕ್ಷಣಾ ಯೋಜನೆ ಮಾಡಿಕೊ ಳ್ಳುವೆನು. ನೀವು ತ್ರಿಕರಣಪೂರ್ವಕ ಸಮ್ಮತಿಯಿತ್ತುದಕ್ಕೆ ನಾನು ಕೃತಜ್ಞ ನಾಗಿರುವೆನು. ಎಂದು ನುಡಿಯುತ್ತಾ ತನ್ನ ಕೈಯಲ್ಲಿರುವ ಖಡ್ಗವನ್ನೆತ್ತಿ ಶ್ರೀಶಂಕರಾಚಾರ್ಯರ ಕಂಠವನ್ನು ಕತ್ತರಿಸುವದಕ್ಕೆ ಸಿದ್ಧನಾಗಿದ್ದನು.

ಆ ಸಮಯದಲ್ಲಿ ಶ್ರೀ ಶಂಕರಾಚಾರ್ಯರ ರಕ್ಷಣೆಗೆ ಅವರ ಶಿಷ್ಯರಾದ ಪದ್ಮಪಾದರು ಜಾಗರೂಕತೆಯಲ್ಲಿದ್ದರು. ಆ ಸಮಯದಲ್ಲಿ ಆ ಪದ್ಮಪಾದರು ಗುರುವು ತಪಸ್ಸು ಮಾಡುವ ಸ್ಥಳಕ್ಕೆ ಕಿಂಚಿತ್ ದೂರದಲ್ಲಿದ್ದರು. ಆದುದರಿಂದ ಕಾಪಾಲಿಕನ ಕೃತ್ಯಗಳನ್ನು ಗಮನಿಸಿದವರಾಗಲಿಲ್ಲ. ಆದರೆ ತಮ್ಮ ಯೋಗ ಶಕ್ತಿಯಿಂದ ತನ್ನ ಗುರುವಿಗೆ ಬಂದೊದಗಿರುವ ವಿಪತ್ತನ್ನೂಹಿಸಿ ಕೆಲವು ಮಂತ್ರ ಗಳನ್ನುಚ್ಚರಿಸುತ್ತಾ ಗುರುಗಳಿರುವ ಸ್ಥಲಕ್ಕೆ ಬಂದರು. ಬಂದು ನೋಡಲಾಗಿ ಕಾಪಾಲಿಕನು ಶ್ರೀ ಶಂಕರಾಚಾರ್ಯರನ್ನು ವಧಿಸುವದಕ್ಕುದ್ಯುಕ್ತನಾಗಿರುವು ದನ್ನು ನೋಡಿದನು. ಶ್ರೀಗುರು ಮೂರ್ತಿಯನ್ನು ಬೇಗನೇ ಸಂರಕ್ಷಿಸಬೇಕೆಂದು ಶ್ರೀಲಕ್ಷ್ಮೀನೃಸಿಂಹಸ್ವಾಮಿಯನ್ನು ಕುರಿತು ಪ್ರಾರ್ಥಿಸಿದನು. ಉತ್ತರಕ್ಷಣ ದಲ್ಲಿಯೇ ಸ್ವಾಮಿಯು ಪ್ರತ್ಯಕ್ಷನಾಗಿ ಕಾಪಾಲಿಕನನ್ನು ತುಂಡುತುಂಡುಗಳಾಗಿ ಬೀಳುವಂತೆ ಖಂಡಿಸಿ, ಶ್ರೀ ಶಂಕರನನ್ನು ಸಂರಕ್ಷಿಸಿದನು ಹೀಗೆ ಪ್ರತ್ಯಕ್ಷನಾದ ಲಕ್ಷ್ಮೀನೃಸಿಂಹಸ್ವಾಮಿಯನ್ನು ಕಂಡು ಶ್ರೀ ಮದಾಚಾರ್ಯರು ಪರಮಾನಂದ

ಭರಿತರಾಗಿ "ಲಕ್ಷ್ಮೀನೃಸಿಂಹಮದೇಹಿಕರಾವಲಂಬಮ್" ಎಂಬ ಅಷ್ಟಕ ದಿಂದ ಸ್ತುತಿಸಿದರು.

ಶ್ರೀ ಶಂಕರಾಚಾರ್ಯರು ಶ್ರೀಗಿರಿಯಲ್ಲಿ ಕೆಲವು ಕಾಲವಿದ್ದರೆಂಬುವುದಕ್ಕೆ ಈ ಕಥೆಯು ನಿದರ್ಶನವಾಗಿರುವದು. ಈ ಪುಣ್ಯ ಕ್ಷೇತ್ರವು ಅತ್ಯಗಾಧವಾದ ಮಹಿಮಾಕರವೆನ್ನುವುದಕ್ಕೆ ದೃಷ್ಟಾಂತವಾಗಿರುವದು.

ಈ ಮಹಾಕ್ಷೇತ್ರವು ವಿಶೇಷವಾದ ಭೂಭಾಗವನ್ನಾಕ್ರಮಿಸಿಕೊಂಡಿರುವದು. ಈ ಭಾಗದ ಉದ್ದವು ೩೦ ಗಾವುದಳತೆಯಾಗಿರುವದು, ವಿಶಾಲವು ೩೦ ಗಾವುದಗಳ ಅಳತೆಯಾಗಿರುವದು ಇದಕ್ಕೆ ನಾಲ್ಕೂ ದಿಕ್ಕುಗಳಲ್ಲಿಯೂ ನಾಲ್ಕು ದ್ವಾರಗಳಿರುವವು. ಈ ಮಧ್ಯದಲ್ಲಿರುವ ಪ್ರದೇಶವೆಲ್ಲವೂ ಅತ್ಯಂತ ಪವಿತ್ರವಾದುದಾಗಿಯೂ ಅನೇಕ ಕ್ಷೇತ್ರಗಳಿಂದ ಪ್ರಕಾಶಿಸುತ್ತಿರುವದು. ಇದಕ್ಕೆ ಮೂಡಲಿನಲ್ಲಿ ತ್ರಿಪುರಾಂತಕವು ಇದೊಂದು ದ್ವಾರವು. ಇದು ಕರ್ನೂಲು ಜಿಲ್ಲೆಯ ಮಾರ್ಕಾಪುರದ ತಾಲೂಕಿನಲ್ಲಿರುವದು. ದಕ್ಷಿಣದ್ವಾರವು ಸಿದ್ಧವಟವು, ಇದು ಕಡಪ ಜಿಲ್ಲೆಯಲ್ಲಿರುವದು. ಪಶ್ಚಿಮದ್ವಾರವು ಆಲಂಪುರವು ಇದು ಕರ್ನೂಲ ಪಟ್ಟಣದ ಪಕ್ಕದಲ್ಲಿರುವದು. ಉತ್ತರದ್ವಾರವು ಉಮಾಮಹೇಶ್ವರವು. ಇದು ತೆಲಂಗಾಣದಲ್ಲಿರುವದು. ಈ ನಾಲ್ಕು ದ್ವಾರಗಳು ಮಹತ್ತರವಾದ ಪವಿತ್ರ ಸ್ಥಳಗಳೆಂದು ಪ್ರಸಿದ್ಧವಾಗಿರುವವು. ಇವುಗಳಲ್ಲಿ ಅನೇಕ ಪುಣ್ಯತೀರ್ಥಗಳೂ, ಹಲವು ದೇವಾಲಯಗಳೂ ಇರುವವು.

ಈ ಪ್ರಕಾರವಾಗಿ ಸಮಭೂಮಿಯಿಂದ ಕೂಡಿದ ಶ್ರೀಶೈಲವು ೧೫೦೦ ಅಡಿಗಳಯೆತ್ತರದಲ್ಲಿದ್ದು, ತಂಪಾದ ವಾತಾವರಣದಿಂದ ಕೂಡಿಕೊಂಡು ಮಾನವರಿಗೆ ಉಲ್ಲಾಸವನ್ನುಂಟುಮಾಡುತ್ತಿರುವದು. ಇದು ಮೂಡಲು ಪಡುವಲು ದಿಕ್ಕುಗಳಿಗೆ ೩ ಮೈಲು, ಬಡಗಲು ಟೆಂಕಲು ದಿಕ್ಕುಗಳಿಗೆ ೬ ಮೈಲು ವಿಸ್ತೀರ್ಣವಾಗಿರುವದು. ಒಂದು ಕಡೆ ಕಾಡು (ಅರಣ್ಯ), ಮತ್ತೊಂದು ಕಡೆ ಕಲ್ಲುಗಳೂ, ಬೇರೊಂದು ಕಡೆ ಹಳ್ಳ–ಕೊಳ್ಳಗಳಿರುವವುದರಿಂದ ಪ್ರಕೃತಿ ಶೋಭೆಗೆ ಆಕರ್ಷವಾಗಿ ನೇತ್ರಾನಂದ,ಮನಾನಂದವನ್ನುಂಟು ಮಾಡುತ್ತಿರುವ ಭೂಪ್ರದೇಶವಾಗಿರುವದು.

# ಸ್ಥಲಮಹಾತ್ಮ್ಯವು



ಭರತ ಖಂಡದಲ್ಲಿರುವ ಪುಣ್ಯಕ್ಷೇತ್ರಗಳಿಗೆಲ್ಲಕ್ಕು ಒಂದೊಂದು ಸ್ಥಲ ಪುರಾಣವಿರುವದು. ಈ ಶ್ರೀಶೈಲಕ್ಕೆ ಸಹಾ ಅಂತಹ ಸ್ಥಲ ಪುರಾಣವಿರುವದು. ಆ ಪುರಾಣವು ೧೮ ಮಹಾಪುರಾಣಗಳಲ್ಲೊಂದಾದ ಸ್ಕಾಂದಪುರಾಣದಲ್ಲಿ ಶ್ರೀಶೈಲ ಖಂಡದಲ್ಲಿ ಉಕ್ತವಾಗಿರುವದು. ಇದು ೩೮ ಅಧ್ಯಾಯಗಳಲ್ಲಿ ೧೮,೫೦೦ ಶ್ಲೋಕಗಳಿಂದ ಹೇಳಲ್ಪಟ್ಟಿರುವದು. ಈ ಮಹಾತ್ಮ್ಯವನ್ನು ಪೂರ್ವದಲ್ಲಿ ಶ್ರೀಮತ್ಪರಮೇಶ್ವರನು ಪಾರ್ವತೀದೇವಿಯವರಕೋಸ್ಕರ ಹೇಳಿರುವನೆಂದು ಉಕ್ತವಾಗಿರುವದು. ಆ ವಿಷಯವನ್ನೇ ಶ್ರೀ ವೇದವ್ಯಾಸ ಮಹರ್ಷಿಗಳ ಅಪೇಕ್ಷೆಯಂತೆ ಸನತ್ಕುಮಾರ ಮಹರ್ಷಿಯು ಬೋಧಿಸಿದಂತಿರುವದು. ಇದನ್ನೇ ನಾಗಲೂಟಿ ಶೇಷನಾಥಾರ್ಯನೆಂಬ ಕವಿಯು ಶ್ರೀ ಪರ್ವತಪುರಾಣವೆಂಬ ಹೆಸರಿನಿಂದ ಒಂದು ಆಂಧ್ರದ ಪದ್ಯಕಾವ್ಯವನ್ನು ರಚಿಸಿರುವನು.

ಈ ಮಹಾತ್ಮ್ಯದಲ್ಲಿ ಶ್ರೀಶೈಲಕ್ಕೂ, ಅರ್ಥಾತ್ ಶ್ರೀ ಪರ್ವತಕ್ಕೂ, ಮಲ್ಲಿಕಾರ್ಜುನಸ್ವಾಮಿಗೂ, ಭ್ರಮರಾಂಬಾದೇವಿಗೂ ಆಯಾ ನಾಮಧೇಯಗಳು ಬಂದ ವಿಧಾನವನ್ನು ಕಥಾರೂಪವಾಗಿ ವಿವರಿಸಲ್ಪಟ್ಟಿರುವದು.

ಬಹು ಪೂರ್ವ ಯುಗದಲ್ಲಿ ಶಿಲಾದನೆಂಬ ಹೆಸರುಳ್ಳ ಮಹರ್ಷಿಯೋರ್ವನಿದ್ದನು. ಆತನಿಗೆ ಬಹುಕಾಲದವರೆಗೂ ಪುತ್ರಸಂತಾನವಾಗಲಿಲ್ಲ. ಆದುದರಿಂದ ಆ ಮಹರ್ಷಿಯು ಭಗವದ್ಭಕ್ತಿಪರನಾದ ಪುತ್ರನೋರ್ವನನ್ನು ಅನುಗ್ರಹಿಸಬೇಕೆಂದು ಮಹಾದೇವನನ್ನು ಕುರಿತು ತಪಸ್ಸು ಮಾಡಿದನು. ಆತನ ತಪೋನಿಯಮಕ್ಕೆ ಸಂತುಷ್ಟನಾಗಿ ಶಂಕರನು ಈರ್ವರು ಪುತ್ರರಾಗುವಂತೆ ಅನುಗ್ರಹಿಸಿದನು. ಆ ಪುತ್ರರಲ್ಲಿ ಓರ್ವನು ನಂದೀಶ್ವರನೂ, ಬೇರೊಬ್ಬನು ಪರ್ವತನು ಜನನವಾದಾರಭ್ಯ ಆ ಮಕ್ಕಳಿಬ್ಬರು ಭಗವದ್ಭಕ್ತಿ ಸಂಪನ್ನರಾಗಿ ಪರಶಿವನನ್ನು ಕುರಿತು ಘೋರವಾದ ತಪಸ್ಸನ್ನು ಮಾಡಲಾರಂಭಿಸಿದರು.

ಅವರ ತಪಃಪ್ರಭಾವಕ್ಕೆ ಮೆಚ್ಚಿ ಶಿವನು ಪ್ರಸನ್ನನಾಗಿ ನಿಮಗೆ ಬೇಕಾದ ವರವನ್ನು ಕೇಳಿರೆಂದು ಅಪ್ಪಣೆಕೊಟ್ಟನು. ಮೊದಲನೆಯವನಾದ ನಂದೀಶ್ವ

ರನು ದೇವಾ ! ನೀನು ಯಾವಾಗಲೂ ನನ್ನ ಮೇಲೆ ವಾಸವಾಡಿಕೊಂಡು ನಿನಗೆ ವಾಹನನಾಗಿರುವ ಭಾಗ್ಯವನ್ನು ಅನುಗ್ರಹಿಸು ಎಂದ ಕೇಳಿದನು. ಪರಮೇಶ್ವರನು ಹಾಗೇ ಆಗಲೆಂದಾಣತಿಯನ್ನಿತ್ತನು. ನಂದೀಶ್ವರನು ಕೂಡಲೇ ಒಂದು ಪರ್ವತಾಕಾರವನ್ನು ತಾಳಿ ಅಲ್ಲಿ ನೆಲಸಿದನು. ಆ ಸ್ಥಲವು ನಂದಿಮಂಡ ಲವೆಂಬ ಹೆಸರಿನಿಂದ ಪ್ರಸಿದ್ಧವಾಗಿ ಶ್ರೀಶೈಲಕ್ಕೆ ನೈರುತ್ಯ ದಿಕ್ಕಿನಲ್ಲಿ ೫೦ ಮೈಲು ದೂರದಲ್ಲಿ ವಿರಾಜಿಸುತ್ತಿರುವದು.

ಕೆಲವು ಕಾಲದನಂತರ ಪರ್ವತನೆಂಬ ಎರಡನೆಯ ಶಿಲಾದಮಹರ್ಷಿಯ ಮಗನಿಗೂ ಪ್ರಸನ್ನನಾಗಿ ವರವನ್ನು ಕೇಳೆಂದೂ ನುಡಿದನು. ಅದಕ್ಕೆ ಭಕ್ತನಾದ ಪರ್ವತನು ಭಕ್ತಿಯಿಂದ ಕರಗಳನ್ನು ಜೋಡಿಸಿ, ಪರಾತ್ಪರಾ ! ಪರ್ವತ ರೂಪವನ್ನು ಧರಿಸಿದ ನನ್ನ ಮೇಲೆ ನೀನು ಸ್ಥಿರವಾಗಿ ನೆಲಸಿರಬೇಕೆಂತಲೂ, ನಾನು ತಪಸ್ಸನ್ನಾಚರಿಸಿದ ಈ ಸ್ಥಲದಲ್ಲಿಯೇ ಪರ್ವತಲಿಂಗವೆಂಬ ಹೆಸರಿನಿಂದ ಆವಿರ್ಭವಿಸಿ ಈ ಸ್ಥಲವನ್ನು ಪವಿತ್ರವನ್ನಾಗಿ ಮಾಡಬೇಕೆಂತಲೂ ನನ್ನ ಪ್ರಾರ್ಥನೆಯೆಂದು ಭಿನ್ನವಿಸಿದನು. ಅದಕ್ಕೆ ಪರಮೇಶ್ವರನು ಭಕ್ತವರ್ಯನೇ ? ನಿನ್ನ ಈ ಬಯಕೆಯು ಲೋಕೋಪಕಾರವಾಗಿದೆ. ಇದನ್ನು ನಾನು ಅನುಗ್ರಹಿಸುವೆನು. ಮತ್ತೊಂದು ಬಯಕೆಯನ್ನು ಬೇಡು ಎಂದು ಹೇಳಿದನು. ಅದಕ್ಕಾಗಿ ಪರ್ವತನು ಮಹಾದೇವಾ ! ಭೂಲೋಕದ ಸಮಸ್ತ ತೀರ್ಥಗಳೂ ಇಲ್ಲಿ ಸನ್ನಿಧಾನವನ್ನು ಹೊಂದಿ ಸಮಸ್ತ ದೇವತೆಗಳಿಂದ ಕೂಡಿರುವದಾಗ ಬೇಕು ಎಂದು ಪ್ರಾರ್ಥಿಸಿದನು. ಈ ವರವು ಸಹಾ ಲೋಕೋಪಕಾರಕ ವಾದದ್ದೇ ಇದನ್ನು ಅನುಗ್ರಹಿಸಲಭ್ಯಂತರವಿಲ್ಲ, ಬೇರೊಂದು ವರವನ್ನು ಕೇಳು ಎಂದು ಪರಶಿವನು ನುಡಿದನು. ಅದಕ್ಕಾ ಭಕ್ತಪುಂಗವನಾದ ಪರ್ವತನು ಹೇ ಜಗಚ್ಚಾಲಕಾ ? ನೀನು ಆವಿರ್ಭವಿಸಿರುವ ಪರ್ವತದ ಶಿಖರವನ್ನು ನೋಡಿದವರಿಗೆ ಪುನರಪಿ ಜನನ, ಪುನರಪಿ ಮರಣಗಳಿಲ್ಲದಂತೆ ಮಾಡುವ ವರವನ್ನನುಗ್ರಹಿಸು, ಇದಕ್ಕಿಂತಲೂ ನಾನು ಬೇಡತಕ್ಕ ವರವಾವುದೂ ಇಲ್ಲವೆಂದು ನುಡಿದನು.

ಪರಶಿವನು ಪರ್ವತನು ಬಯಸಿದ ವರಗಳನ್ನಿತ್ತು ಆಶೀರ್ವದಿಸಿ ಅಂತರ್ಧಾನ ಹೊಂದಿದನು. ಆ ಪರ್ವತನೇ ಶ್ರೀಶೈಲವಾಗಿ ರೂಪವನ್ನು ತಾಳಿದನು.

ಆ ಪರ್ವತ ಶಿಖರದ ಮೇಲೆ ಪರ್ವತಲಿಂಗನಾಮದಿಂದ ಶಂಕರನು ಆವಿರ್ಭವಿಸಿದನು. ಆ ಪರಮಾತ್ಮನ ಅಣತಿಯಿಂದ ಸಮಸ್ತ ದೇವತೆಗಳೂ, ಸಮಸ್ತ ಪುಣ್ಯತೀರ್ಥಗಳೂ ಅಲ್ಲಿ ವಿರಾಜಿಸದವು. ಭಕ್ತರ ಪಾಪ ಸಂಕುಲವನ್ನೆಲ್ಲವೂ ಪರಿಹರಿಸುತ್ತಾ, ಈ ಮಹಾ ಕ್ಷೇತ್ರವು ಭಾರತದೇಶದಲ್ಲಿರುವ ಶೈವಕ್ಷೇತ್ರಗಳಲ್ಲಿ ಅತ್ಯಂತ ಪ್ರಧಾನವಾದುದಾಗಿ ಪರಗಣಿಸಲ್ಪಟ್ಟಿರುವದು.

ಭಕ್ತಶ್ರೇಷ್ಠನಾದ ಪರ್ವತನ ಅಪೇಕ್ಷೆಯಂತೆ ಏರ್ಪಟ್ಟ ಈ ಕ್ಷೇತ್ರವು ಪರ್ವತಕ್ಷೇತ್ರವು ಅಥವಾ ಶೈಲಕ್ಷೇತ್ರವು ಎಂದು ಪ್ರಸಿದ್ಧವಾಗಿರಬೇಕಾದುದು. ಆದರೆ ಮುಂದೆ "ಶ್ರೀ" ಯಂಬುವ ಅಕ್ಷರವನ್ನೇತಕ್ಕೆ ಸೇರಿಸಬೇಕು, ಎಂದು ಯಾರಾದರೂ ಸಂಶಯದಿಂದ ಕೇಳಬಹುದಾಗಿದೆ. ಈ ಶ್ರೀಕಾರವು ಸೇರುವದಕ್ಕೆ ಒಂದು ಇತಿಹಾಸವಿರುವದು.

ಕೃತಯುಗದಲ್ಲಿ ವಸುಮತಿಯೆಂಬ ಓರ್ವ ಮುನಿಕನ್ನಿಕೆಯು ಶಿವನನ್ನು ಕುರಿತು ಇಲ್ಲಿ ಘೋರ ತಪವನ್ನಾಚರಿಸಿದಳು. ಮಹಾದೇವನು ಪ್ರತ್ಯಕ್ಷನಾದನು. ಪ್ರಸನ್ನನಾದ ಪರಶಿವನನ್ನು ನೋಡಿ ಮಹಾಸ್ವಾಮಿ ! 'ವಸುಮತಿ' ಯೆಂಬುವ ಶಬ್ದಕ್ಕೆ ಬದಲಾಗಿ "ಶ್ರೀ" ಎಂಬ ಹೆಸರು ಸ್ಥಿರವಾಗುವಂತೆಯೂ, ತನ್ನ ಹೆಸರಿನಿಂದಲೇ ಈ ಪರ್ವತ ಕ್ಷೇತ್ರವು ಪ್ರಸಿದ್ಧವಾಗುವಂತೆಯೂ ಆಕೆಯು ವರವನ್ನು ಕೇಳಿದಳು. ಪರಮಾತ್ಮನು ಹಾಗೇ ಆಗಲೆಂದು ವರವನ್ನಿತ್ತನು. ಆದುದರಿಂದಲೇ ಈ ಪರ್ವತಕ್ಕೆ ಶ್ರೀಶೈಲ ಅರ್ಥಾತ್ ಶ್ರೀಪರ್ವತಯೆಂದು ಪ್ರಸಿದ್ಧವಾಗಿರುವದು.

ಪರ್ವತನ ಅಭೀಷ್ಟದಂತೆ ಪರ್ವತಲಿಂಗನಾಮದಿಂದ ಪ್ರಸಿದ್ಧವಾದ ಪರಮ ಶಿವನಿಗೆ 'ಮಲ್ಲಿಕಾರ್ಜುನ' ನಾಮವು ಉಂಟಾಗುವದಕ್ಕೆ ಕಾರಣವಿಲ್ಲದೇ ಇಲ್ಲ. ಆ ಕಾರಣವು ಸ್ಕಾಂದಪುರಾಣದಲ್ಲಿ ವಿಶದವಾಗಿ ಹೇಳಲ್ಪಟ್ಟಿರುವದು.

ಪೂರ್ವದಲ್ಲಿ ಚಂದ್ರಗುಪ್ತಿಯೆಂಬ ಪಟ್ಟಣವಿದ್ದಿತು ಆ ಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ತತ್ಪರಿಸರ ಪ್ರದೇಶಗಳನ್ನೆಲ್ಲವೂ ಚಂದ್ರ ಗುಪ್ತನೆಂಬ ಗುಪ್ತವಂಶದ ರಾಜನು ಪರಿಪಾಲಿಸುತ್ತಿದ್ದನು. ಆತನ ಪುತ್ರಿಕಾ ರತ್ನವಾದ ಚಂದ್ರಮತಿಯೆಂಬವಳು ಲೋಕೋತ್ತರ ಸುಂದರಿಯಾಗಿದ್ದಳು.

ಆ ಸುಂದರಿಗೆ ಬಾಲ್ಯದಿಂದಲೂ ಶಿವಭಕ್ತಿಯು ಹೆಚ್ಚಾಗಿದ್ದಿತು. ಆ ವನಿತೆ ದಿನ ದಿನ ಪ್ರವರ್ಧಮಾನಳಾಗಿ ಬೆಳೆದು ಯುಕ್ತವಾದ ವಯಸ್ಸಿಗೆ ಬಂದಳು. ಆಕೆಯ ವರ ರೂಪರೇಖಾ ಲಾವಣ್ಯಗಳನ್ನಾಲಿಸಿದವರು, ರಾಜಪುತ್ರರು ಪಾಣಿ ಗ್ರಹಣ ಮಾಡಿಕೊಳ್ಳಲಪೇಕ್ಷಿಸಿದರು. ಆದರೆ ಚಂದ್ರಮತಿಗೆ ವಿಷಯಾಭಿ ಲಾಷೆಯಿರಲಿಲ್ಲ. ನವವಿಧಭಕ್ತಿಗಳಿಂದ ಕೂಡಿದ ಶಿವಾರ್ಚನೆಯಲ್ಲೇ ಮನ ಸ್ಸನ್ನು ಲೀನಮಾಡಿ ಸದಾ ಸದಾಶಿವನ ಧ್ಯಾನದಲ್ಲೇ ಮಗ್ನಳಾಗಿರುತ್ತಿದ್ದಳು. ಮಾನವ ವರ್ಗದ ಪರಿಚಯ ಅಸಹ್ಯವಾಗುತ್ತ ಬಂದಿತು. ತನ್ನ ಜೀವನ ವನ್ನೆಲ್ಲವೂ ಭಗವದಾರಾಧನೆಯಲ್ಲೇ ಕಳೆಯಲುದ್ಯುಕ್ತಳಾಗಿ, ದೃಢಸಂಕಲ್ಪ ದಿಂದ ಶ್ರೀಶೈಲದಲ್ಲಿ ಪರಮಶಿವನನ್ನಾರಾಧಿಸುತ್ತಾ ಬೇರೊಂದು ಯೋಚನೆ ಯಿಲ್ಲದೆ ಕಾಲಹರಣಮಾಡುವದಕ್ಕಾರಂಭಿಸಿದಳು. ಆ ಚಂದ್ರಮತಿಯು ಪ್ರತಿ ನಿತ್ಯವು ಸ್ವಚ್ಛವಾದ ಬಿಳಿಯ ಮಲ್ಲಿಕಾ ಕುಸುಮಗಳನ್ನೇ ಹಾರಗಳನ್ನಾಗಿ ಕಟ್ಟಿ ಅವುಗಳಿಂದ ಪರ್ವತಲಿಂಗವನ್ನಲಂಕರಿಸುತ್ತಿದ್ದಳು. ಒಂದು ದಿನವಾದರೂ ತಪ್ಪದೆ ಮಲ್ಲಿಕಾ ಪುಷ್ಪಗಳಿಂದ ತನ್ನನು ಪೂಜಿಸುವದನ್ನು ನೋಡಿ ಶಂಕರನು ಪ್ರಸನ್ನನಾಗಿ ಚಂದ್ರಮತೀ ? ನಿನ್ನ ಪೂಜೆಯು ನನಗೆ ಪರಮಾನಂದವನ್ನುಂಟು ಮಾಡಿರುವದು. ನಿನಗೆ ಇರುವ ಅಭೀಷ್ಟವನ್ನು ತಿಳಿಸೆಂದು ಕೇಳಿದನು. ಅದಕ್ಕೆ ಚಂದ್ರಮತಿಯು ದೇವದೇವಾ ? ನೀನು ನಿನ್ನ ಶಿರಸ್ಸಿನಲ್ಲಿ ಗಂಗಾದೇವಿ ಯನ್ನು ಹೇಗೆ ಧರಿಸುವಿಯೋ, ಚಂದ್ರನನ್ನು ಹೇಗೆ ಅಲಂಕಾರವಾಗಿ ಧರಿಸಿರು ವೆಯೋ ಅದರಂತೆ ಮಲ್ಲಿಕಾ ಕುಸುಮವನ್ನು ಯಾವಾಗಲೂ ಧರಿಸುವವನಾಗು ಇದಲ್ಲದೆ ನನ್ನನ್ನು ಪರಿಗ್ರಹಿಸು ಎಂದು ಪ್ರಾರ್ಥಿಸಲು ಶಂಕರನು ಸಂತಸದಿಂದ ಚಂದ್ರಮತಿಯ ಮನೋಭಿಷ್ಟದಂತೆ ನಡೆಯಲುತ್ಸುಕತೆಯಿಂದ ' ಹೇ ಚಂದ್ರ ಮತೀ ? ನೀನು ಸದ್ಭಕ್ತಿಯಿಂದ ಮಲ್ಲಿಕಾಕುಸುಮದಾಮದಿಂದ ನನ್ನನ್ನು ಪೂಜಿಸಿಯಾದಕಾರಣ ನಾನು ಮಲ್ಲಿಕಾರ್ಜುನನಾದೆನು. ಭ್ರಮರಕೀಟ ನ್ಯಾಯದಿಂದ ಭಕ್ತರನ್ನು ನೋಡುತ್ತಿರುವದರಿಂದ ನೀನು ಭ್ರಮರಾಂಬಿಕೆ ಯೆಂದು ಪ್ರಸಿದ್ಧಳಾಗಿ ನನ್ನ ಮನದನ್ನೆಯಾಗಿರು' ಎಂದು ನುಡಿದನು.

'ಅರ್ಜುನ'ಯೆಂಬ ಪದಕ್ಕೆ ಬಿಳುಪುಯೆಂಬ ಅರ್ಥವಿರುವದು ಬಿಳಿಯ ಮಲ್ಲಿಕಾ ಮಾಲೆಗಳನ್ನು ಧರಿಸುವದರಿಂದ ಪರ್ವತಲಿಂಗಕ್ಕೆ 'ಮಲ್ಲಿಕಾರ್ಜುನ'

ನಾಮವು ಉಂಟಾಯಿತು. ಆ ಮಹಾದೇವನು ಚಂದ್ರಮತಿಯು ಬಯಸಿ ದಂತೆ ಅರ್ಧಾಂಗಿನಿಯನ್ನಾಗಿ ಗ್ರಹಿಸಿದನು.

ಭ್ರಮರವು ಬಂದು ಹುಳವನ್ನು ತನ್ನ ಗೂಡಿನೊಳಗಿಂದ ಧ್ವನಿಮಾ ಡುತ್ತಾ ಆ ಗೂಡಿನ ಸುತ್ತಲೂ ತಿರುಗುತ್ತಿದ್ದರೆ ಕೆಲವು ಕಾಲದೊಳಗಾಗಿ ಗೂಡಿ ನೊಳಗಿರುವ ಹುಳವು ಸಹ ಭ್ರಮರವಾಗಿ ಬದಲಾಯಿಸುತ್ತದೆ. ಇದಕ್ಕೇನೇ ಭ್ರಮರಕೀಟ ನ್ಯಾಯವೆಂದು ನುಡಿಯುತ್ತಾರೆ. ಆ ರೀತಿಯಾಗಿಯೇ ಶಿವನ ಪತ್ನಿಯಾದ ಚಂದ್ರಮತಿಯು ಭಕ್ತರನ್ನು ತನ್ನೊಂದಿಗೆ ಪರಮಶಿವನಲ್ಲಿ ಅತ್ಯಂತ ಭಕ್ತಿಶ್ರದ್ಧೆಗಳುಳ್ಳವನನ್ನಾಗಿ ಮಾಡುತ್ತಾಳೆ. ಆದುದರಿಂದಲೇ ಆ ಚಂದ್ರಮತಿಗೆ ಭ್ರಮರಾಂಬಯೆಂಬ ನಾಮ ಸಾರ್ಥಕವಾಗಿರುವದೆನ್ನುತ್ತಾರೆ.

ಈ ಕಥೆಯು ಸ್ಕಾಂದಪುರಾಣದಲ್ಲಿರುವದು. ಈ ವಿಷಯವು ೧೬ ನೇ ಶತಮಾನದಲ್ಲಿ ಶಿಲಾಫಲಕದಲ್ಲಿ ಕೆತ್ತಲ್ಪಟ್ಟಿರುವದು.

ಶ್ರೀಶೈಲ ಕ್ಷೇತ್ರಕ್ಕೆ ಬರುವ ಯಾತ್ರಿಕರಿಗೆ ಅಲ್ಲಿರುವ ಸ್ಥಳದವರು ಕ್ಷೇತ್ರ ಮಹಾತ್ಮ್ಯವನ್ನು ಬೇರೊಂದು ರೀತಿಯಾಗಿ ಹೇಳುತ್ತಿರುವದುಂಟು ? ಅದೇ ನೆಂದರೆ ?

ಕೃಷ್ಣಾನದಿಗೆ ಉತ್ತರದಲ್ಲಿ ಚಂದ್ರಗುಪ್ತಿ ಪಟ್ಟಣವೆಂಬ ನಗರವು ಪ್ರಸಿದ್ಧ ವಾಗಿದ್ದಿತು. ಆ ಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಚಂದ್ರಗು ಪ್ತನೆಂಬ ರಾಜನು ಸುತ್ತುಮುತ್ತಲ ಪ್ರದೇಶಗಳನ್ನೆಲ್ಲವು ಪರಿಪಾಲಿಸುತ್ತಿದ್ದನು. ಚಂದ್ರಮತಿ ಆತನ ಮಗಳು. ಮಹತ್ತರ ಸೌಂದರ್ಯವತಿ. ಆ ಮಗಳು ಹುಟ್ಟಿದ ಕೆಲವು ಕಾಲಕ್ಕೇನೇ ಚಂದ್ರಗುಪ್ತನು ಪರರಾಜರ ಮೇಲೆದಾಳಿಹೊರಟು ಅನೇಕ ವರ್ಷಗಳು ದೇಶಾಂತರಗಳಲ್ಲಿಯೇ ಕಾಲಹರಣಮಾಡಿದನು. ಕೆಲವು ಕಾಲ ಕಳೆದ ಬಳಿಕ ಮರಳಿ ಬಂದ ರಾಜನು ತನ್ನ ಅಂತಃಪುರದಲ್ಲಿ ಲೋಕೋ ತ್ತರ ಸೌಂದರ್ಯವತಿಯಾದ ಚಂದ್ರಮತಿಯನ್ನು ಕಂಡನು. ಆ ಜಗ ನ್ಮೋಹನಾಕಾರಕ್ಕೆ ರಾಜನು ಮುಗ್ಧನಾಗಿ ಆ ಪುತ್ರಿಕಾರತ್ನವನ್ನೇ ಮೋಹಿಸಿ ದನು. ಆ ಸುಂದರಿಯು ತನ್ನ ಮಗಳೆಂತಲು, ಆಕೆಯಲ್ಲಿ ಪ್ರೇಮಿಸುವದು ತುಂಬಾ ಅಧರ್ಮವೆಂತಲು ರಾಣಿಯು ಪರಿಪರಿ ವಿಧದಿಂದ ಬೋಧಿಸಿದರೂ

ಕೇಳದೆ ಮೌಢ್ಯದಿಂದ ಆ ಪುತ್ರಿಕೆಯನ್ನೇ ಮದುವೆ ಮಾಡಿಕೊಳ್ಳಲು ನಿಶ್ಚಯಿಸಿದನು. ಕೊನೆಗೆ ರಾಜನಾಮುಗಳನ್ನು ಬಲಾತ್ಕರಿಸುವದಕ್ಕೆ ಸಿದ್ಧನಾದನು ತಂದೆಯ ಈ ನೈಚ್ಯಕ್ಕೆ ಚಂದ್ರವತಿಯು ತುಂಬಾ ಅಸಹ್ಯಭಾವನೆಯನ್ನು ಹೊಂದಿ, ಮಹತ್ತರವಾದ ಕೋಪದಿಂದ ಆತನ ರಾಜ್ಯವು ನಾಶವಾಗುವಂತೆ ಶಪಿಸಿ, ಆತ್ಮರಕ್ಷಣೆಗಾಗಿ ಶ್ರೀಶೈಲ ಪ್ರಾಂತಕ್ಕೆ ಹೋದಳು. ಚಂದ್ರವತಿಯು ಆ ಪರ್ವತದಲ್ಲಿಯೇ ನಿವಾಸಮಾಡುತ್ತಾ. ಅಲ್ಲಿರುವ ಅರಣ್ಯದ ಫಲಗಳನ್ನು ತಿನ್ನುತ್ತಾ, ಹಸುಗಳ ಹಾಲು ಕುಡಿದು ಜೀವಯಾತ್ರೆ ಸಾಗಿಸುತ್ತಿದ್ದಳು, ಇದಕ್ಕಾಗಿ ಆ ಚಂದ್ರವತಿಯು ಕೆಲವು ಹಸುಗಳನ್ನು ಸಂರಕ್ಷಿಸುತ್ತಾ, ಅವುಗಳನ್ನು ಮೆಯಿಸುವದಕ್ಕು, ಸಂರಕ್ಷಿಸುವದಕ್ಕು ಓರ್ವ ಗೋಪಾಲ ಬಾಲಕನನ್ನು ನಿಯಮಿಸಿದಳು.

ಆ ಚಂದ್ರವತಿಯ ಸಂರಕ್ಷಣೆಗೊಳಪಟ್ಟಿದ್ದ ಹಸುಗಳು ಪ್ರತಿ ನಿತ್ಯವೂ ಸಕ್ರಮವಾಗಿ ಹಾಲನ್ನು ಕರೆಯುತ್ತಿದ್ದವು. ಆದರೆ ಒಂದು ಹಸುವು ಮಾತ್ರ ಒಂದು ದಿನವಾದರೂ ಹಾಲನ್ನು ಕರೆಯದೆ ಬರಿಯ ಕೆಚ್ಚಲಿನಿಂದಲೇ ಬರುತ್ತಿದ್ದಿತು. ಇದನ್ನು ನೋಡಿದ ರಾಜಪುತ್ರಿಗೆ ತುಂಬಾ ಆಶ್ಚರ್ಯವಾಯಿತು. ಆ ಹಸುವು ಎಲ್ಲಿಗೆ ಹೋಗುವದೋ ವಿಶೇಷವೇನೋ ಪರಿಕ್ಷಿಸಿ ಗುರ್ತಿಸಬೇಕೆಂದು ಚಂದ್ರವತಿಯು ಗೋಪಾಲಕನಿಗೆ ಅಪ್ಪಣೆಮಾಡಿದಳು. ಆ ಗೋಪಾಲಕನು ರಾಜಪುತ್ರಿಯು ಹೇಳಿದಂತೆ ಆ ಹಸುವಿನ ಹಿಂದೆಯೇ ಹೋದನು. ಆ ಹಸುವು ಮೆಲ್ಲನೇ ಶ್ರೀಶೈಲದ ಮೇಲಕ್ಕೆ ಹೋಗಿ ಲಿಂಗಾಕಾರವಾಗಿದ್ದ ಒಂದು ಕಲ್ಲಿನ ಮೇಲೆ ತನ್ನ ಹಾಲನ್ನು ಧಾರೆಯಾಗಿ ಸುರಿಯಿತು. ಈ ವಿಷಯವನ್ನು ಗೋಪಾಲಕನು ರಾಜಕುಮಾರಿಗೆ ತಿಳುಹಿಸಿದನು. ಆ ಚಂದ್ರವತಿಯು ಇದಕ್ಕೆ ಆಶ್ಚರ್ಯಹೊಂದಿ ತಾನೇ ಆ ಹಸುವಿನ ಹಿಂದೆಯೇ ಹೋಗಿ, ಹಸುವು ಒಂದು ಲಿಂಗದ ಮೇಲೆ ಅಭಿಷೇಕ ಮಾಡುವದನ್ನು ಕಣ್ತುಂಬ ನೋಡಿ ಚಕಿತಳಾದಳು. ಆ ಹಸುವಿನಿಂದ ಕ್ಷೀರಾಭಿಷೇಕವನ್ನು ಹೊಂದುತ್ತಿದ್ದ ಲಿಂಗವೇ ಪರ್ವತಲಿಂಗವು.

ನಂತರ ಮಲ್ಲಿಕಾರ್ಜುನಸ್ವಾಮಿಯು ರಾಜಪುತ್ರಿಯ ಸ್ವಪ್ನದಲ್ಲಿ ಪ್ರತ್ಯಕ್ಷವಾಗಿ ತನಗೊಂದು ಆಲಯುವನ್ನು ನಿರ್ಮಿಸಬೇಕೆಂದಪೇಕ್ಷಿಸಿದನು. ಮಹದಾನಂದದಿಂದ ಆಲಯುವನ್ನು ನಿರ್ಮಿಸಿ, ಅತ್ಯಂತ ಭಕ್ತಿ ಭಾವದಿಂಕ ಮಿಳಿತಳಾಗಿ

ಪ್ರತಿನಿತ್ಯವು ಲಿಂಗಪೂಜೆಯನ್ನು ಮಾಡುತ್ತಾ, ತನ್ನ ಜೀವಿತವನ್ನೆಲ್ಲವೂ ಅಲ್ಲಿಯೇ ಕಳೆದಳು.

ಈ ಗಾಥೆಯು ಶ್ರೀಶೈಲ ಕ್ಷೇತ್ರದ ಆಲಯಪ್ರಾಕಾರಕ್ಕೆ ಹೊರಭಾಗದಲ್ಲಿರುವ ಎರಡು ಸ್ತಂಭಗಳ ಮೇಲೆ ಕೆತ್ತಲ್ಪಟ್ಟಿರುವದು.

ಪರ್ವಪಕ್ಕೆ ಶ್ರೀ ಪರ್ವತವೆಂತಲೂ, 'ಮಲ್ಲಿಕಾರ್ಜುನ' ಲಿಂಗವೆಂತಲೂ, ಹೆಸರುಗಳುಂಟಾಗುವದಕ್ಕೆ ಕಾರಣವನ್ನು ವಿವರಿಸುತ್ತಲಿರುವ ಬೇರೊಂದು ಗಾಥೆಯು ಸಹ ಇರುವದು.

ಕೆಲವು ಯುಗಗಳ ಹಿಂದೆ ಇಲ್ಲಿ ಶಿಲಾದನೆಂಬ ಮಹರ್ಷಿ ವಾಸಮಾಡುತ್ತಿದ್ದನು. ಆತನಿಗೆ ಶ್ರೀದೇವಿಯೆಂಬವಳೂ, ಪರ್ವತನೆಂಬ ಮಗನೂ ಇದ್ದರು. ಅವರೀರ್ವರೂ ಶಿವಭಕ್ತರು. ಆವರೀರ್ವರು ಶಿವನಲ್ಲಿ ಅತ್ಯಂತ್ಯೋತ್ಕಟವಾದ ಭಕ್ತಿಯುಕ್ತರಾಗಿ ಮಹೇಶ್ವರನನ್ನು ಕುರಿತು ಘೋರವಾದ ತಪಸ್ಸನ್ನಾಚರಿಸಿ, ಆ ಉಪಾಸ್ಯದೇವನನ್ನು ಪ್ರಸನ್ನೀಕರಿಸಿಕೊಂಡು ಕೃತಾರ್ಥರಾದರು. ತತ್ಫಲಿತವಾಗಿ ಈ ಪರ್ವತಕ್ಕೆ ಶ್ರೀಪರ್ವತವೆಂತಲೂ, ಇಲ್ಲಿಯ ಶಿವಲಿಂಗಕ್ಕೆ ಶ್ರೀ ಪರ್ವತಲಿಂಗವೆಂತಲೂ ನಾಮಗಳುಂಟಾದವು. ಈ ಪ್ರಕಾರ, ಇರ್ವರ ಹೆಸರುಗಳೂ ಆಚಂದ್ರತಾರಾರ್ಕವಾಗಿ ಸುಸ್ಥಿರವಾದುದರಿಂದ ಆ ಶ್ರೀದೇವಿ ಪರ್ವತರೆಂಬವರು ಧನ್ಯರಾದರು.

ನಂತರ ಪಾಂಡವರು ಅರಣ್ಯವಾಸ ಮಾಡುತ್ತಿರುವ ಕಾಲಕ್ಕೀಪರ್ವತಕ್ಕೆ ಬಂದರು. ಮಹಾಶಿವಭಕ್ತನಾದ ಅರ್ಜುನನು ಅತ್ಯದ್ಭುತವಾದ ನಿಯಮದಿಂದ ಪ್ರತಿನಿತ್ಯವು ಶ್ರೀ ಪರ್ವತಲಿಂಗವನ್ನು ಕಾಡುಮಲ್ಲಿಗೆ ಹೂವುಗಳಿಂದ ಪೂಜಿಸುತ್ತಿದ್ದನು. ಅರ್ಜುನನೇ ತನ್ನ ನಾಮವನ್ನು, ತಾನು ಪೂಜಿಸುವ ಮಲ್ಲಿಗೆಗಳ ನಾಮವನ್ನು ಸೇರಿಸಿ ಶ್ರೀಪರ್ವತಲಿಂಗಕ್ಕೆ ಮಲ್ಲಿಕಾರ್ಜುನ ಲಿಂಗವೆಂದು ಹೆಸರಿಟ್ಟನು ಅಂದಿನಿಂದಲೂ ಶ್ರೀಶೈಲ ಲಿಂಗವು ಮಲ್ಲಿಕಾರ್ಜುನ ಲಿಂಗವೆಂದು ಪ್ರಸಿದ್ಧವಾಯಿತು.

ಭ್ರಮರಾಂಬಾ ದೇವಿಯನ್ನು ಕುರಿತು ಮತ್ತೊಂದು ಇತಿಹಾಸವಿರುವದು. ಆ ದೇವಿಯು ಅಷ್ಟಾದಶ ಶಕ್ತಿಗಳಲೊಂದಾದ ಭ್ರಾಮರೀ ಶಕ್ತಿ

ಯೆಂದು ಇದರೊಳಗಾಗಿಯೇ ಹೇಳಲ್ಪಟ್ಟಿರುವುದಲ್ಲವೇ ? ಆ ದೇವಿಯ ವೃತ್ತಾಂತವು ಶ್ರೀ ದೇವೀಭಾಗವತದಲ್ಲಿ ಹೀಗೆ ಹೇಳಲ್ಪಟ್ಟಿರುವದು.

ಪೂರ್ವಕಾಲದಲ್ಲಿ ಅರುಣನೆಂಬ ರಾಕ್ಷಸನೋರ್ವನಿದ್ದನು. ಅವನು ಬ್ರಹ್ಮದೇವನನ್ನು ಕುರಿತು ಘೋರ ತಪಸ್ಸುಮಾಡಿ ಶಸ್ತ್ರಾಸ್ತ್ರಗಳಿಂದಾಗಲಿ, ಸ್ತ್ರೀಪುರುಷರಿಂದಾಗಲಿ, ದ್ವಿಪಾದ, ಚತುಷ್ಪಾದ ಜಂತುಗಳಿಂದಾಗಲಿ ತನಗೆ ಮರಣವು ಸಂಭವಿಸದಂತೆ ವರವನ್ನು ಹೊಂದಿದನು. ಆ ವರಲಾಭದಿಂದ ಅಹಂಕರಿಸಿ ಆತನ ಲೋಕದಲ್ಲಿರುವ ಪ್ರಜಾನೀಕವನ್ನೆಲ್ಲವು ಬಾಧೆಗೊಳಪಡಿಸಿದನು. ಆದುದರಿಂದ ಆ ಕ್ರೂರ ರಾಕ್ಷಸನನ್ನು ಸಂಹರಿಸುವದಕ್ಕೆ ಭ್ರಾಮರೀ ಶಕ್ತಿಸನ್ನದ್ಧಳಾಗಬೇಕಾಯಿತು. ಆ ದೇವಿಯು ಕೋಟ್ಯಾನುಕೋಟಿ ಭ್ರಮರಗಳಿಂದ (ಗುಂಗುರಿಗಳೂ) ಕೂಡಿದ ಪುಷ್ಪಮಾಲಿಕೆಗಳನ್ನು ಧರಿಸಿ ಆವಿರ್ಭವಿಸಿದಳು. ಆ ದೇವಿಗೆ ಧರಿಸಿದ ಹೂಮಾಲಿಕೆಗಳ ಮೇಲಿದ್ದ ಭ್ರಮರಗಳು ದಾಳಿಯನ್ನಿಟ್ಟು ರಾಕ್ಷಸರನ್ನೆಲ್ಲವು ಪಲಾಯನವಾಗುವಂತೆ ಮಾಡಿದವು.

ಭ್ರಾಮರೀಶಕ್ತಿಸ್ವರೂಪಿಯಾದ ಭ್ರಮರಾಂಬೆಯು ವರಪ್ರಸಾದಿನಿಯಾದ ಕನ್ಯೆಯಂತೆ; ಆ ದೇವಿಯ ನಿವಾಸವು ಮೈಸೂರ ರಾಷ್ಟ್ರವು ಆದುದರಿಂದಲೇ ಶ್ರೀ ಭ್ರಮರಾಂಬಾ ದೇವಿಯವರ ಸನ್ನಿಧಿಯಲ್ಲಿ ಚೈತ್ರೋತ್ಸವವು ಜರುಗುವ ಕಾಲಕ್ಕೆ ಮೈಸೂರು ಪ್ರಾಂತದವರು ತಮ್ಮ ಹೆಣ್ಣುಮಗಳಿಗೆ ಕಾಣಿಕೆಗಳನ್ನು ತಂದುಕೊಡುವದು ಇಂದಿನವರೆಗೂ ಸಂಪ್ರದಾಯವಾಗಿ ಬಂದಿರುವದು.

ಈ ಪ್ರಕಾರವಾಗಿ ಶ್ರೀಶೈಲ ಕ್ಷೇತ್ರಕ್ಕೆ ಸಂಬಂಧಿಸಿದ ಇತಿಹಾಸಗಳು ಅನೇಕ ಪ್ರಕಾರವಾಗಿರುವವು. ಅವು ವಿಭಿನ್ನಗಳಾಗಿ ಕಂಡುಬಂದರೂ ಅವೆಲ್ಲವೂ ಕ್ಷೇತ್ರದ ಮಹಿಮೆಯನ್ನೇ ವ್ಯಕ್ತಮಾಡುತ್ತಲಿರುವವು.

ಹೆಚ್ಚು ಸೂಚನೆ— ಚಂದ್ರಗುಪ್ತನ ಮಗಳು ಚಂದ್ರವತಿಯೆಂದು ಕೆಲವರು, ಚಂದ್ರಮತಿಯೆಂದು ಕೆಲವರು ಭಾವಿಸಿರುತ್ತಾರೆ. ಗ್ರಂಥಸ್ಥ ಪ್ರಮಾಣದಲ್ಲಿ ಚಂದ್ರವತಿಯೆಂದೇ ರೂಢವಾಗಿರುವದರಿಂದ ಚಂದ್ರವತಿಯೆಂದು ಬರೆಯುವದೇ ಸೂಕ್ತವಾಗಿದೆಯೆಂದು ನಂಬಲರ್ಹವಾಗಿರುವದು.

# ಚಾರಿತ್ರಿಕ ವಿಷಯಗಳು

❋❋❋❋

ಪುರಾಣಾಂಶಗಳನ್ನು ಕುರಿತು ಯೋಚಿಸಿದರೆ ಶ್ರೀಶೈಲ ಕ್ಷೇತ್ರವು, ಯುಗ-ಯುಗಾಂತರಗಳಿಂದ ಬಂದ ಸುಪ್ರಭಾವಯುತವಾದ ಸ್ಥಳವೆಂದು ತೋರುತ್ತದೆ. ಆದರೆ ಆ ಅಂಶಗಳ ವಿವೇಚನಮಾತ್ರದಿಂದಲೇ ಇತ್ಯರ್ಥ ಮಾಡುವುದಕ್ಕವಕಾಶವಿಲ್ಲವೆಂದು ಕಾಣುತ್ತದೆ. ಮತ್ತು ಸೂಕ್ತ ಕ್ರಮವಲ್ಲ ವೆಂದು ಭಾಸವಾಗುತ್ತದೆ.

ಚಂದ್ರವತೀ ವೃತ್ತಾಂತವನ್ನು ಅನುಸರಿಸಿ ಗುಪ್ತವಂಶದ ರಾಜರ ಕಾಲ ದಲ್ಲಿ ಈ ಕ್ಷೇತ್ರವು ಪ್ರಕಾಶಕ್ಕೆ ಬಂದಿತೆಂದು ಊಹಿಸುವದಕ್ಕವಕಾಶವಿರು ವದು. ಚಂದ್ರಗುಪ್ತನಾಕಾಲದಲ್ಲಿ ಶ್ರೀಶೈಲ ಪ್ರಾಂತದ ಪ್ರಭುವಾಗಿರಬಹು ದೆಂದು ಊಹಿಸಲು ವಿಶ್ವಸನೀಯವಾಗುತ್ತದೆ.

ನಾಮಸಾಮ್ಯದಿಂದ ಚಂದ್ರಗುಪ್ತ ಮೌರ್ಯನೇ ಪ್ರಾಂತದ ಪ್ರಭುವಾ ಗಿದ್ದನೆಂದು ಕೆಲವರು ಭ್ರಾಂತಿಹೊಂದುತ್ತಿರುವರು. ಆದರೆ ಹಾಗೆ ಊಹಿಸಲು ತಕ್ಕ ಆಧಾರಗಳು ಕಂಡು ಬರುವದಿಲ್ಲ.

ನಲ್ಲಮಲೆ ಬೆಟ್ಟಗಳನ್ನು ಹತ್ತಿ ಸಮಪ್ರದೇಶಕ್ಕೆ ಹೋದರೆ ಮಂಟಪಗಳ ಮತ್ತು ಕುಡ್ಯಗಳ, ಭವನಗಳ, ಶಿಥಿಲವಾದ ಭಾಗಗಳು ಅಸಂಖ್ಯಾಕವಾಗಿ ಕಾಣುತ್ತವೆ. ಆ ಸ್ಥಿತಿಯನ್ನು ಕಂಡರೆ ಇಲ್ಲಿ ಪೂರ್ವಕಾಲಕ್ಕೆ ಘನವಾದ ದುರ್ಗವಿದ್ದಂತೆಯು; ಅಲ್ಲಿ ದೊಡ್ಡ ನಗರವಿದ್ದಂತೆಯು ಸುಸ್ಪಷ್ಟವಾಗಿ ತಿಳಿಯ ಬಹುದಾಗಿದೆ. ನೂತನ ಗೃಹನಿರ್ಮಾಣಕ್ಕಾಗಿ ನಡೆದ ಅಗಳ್ತೆಗಳಲ್ಲಿ ಪ್ರಾಚೀನ ಗೃಹಭಾಗಗಳು, ವಿಶಾಲವಾದ ಬೀದಿಗಳು, ಮಾರ್ಗಗಳು ಹೊರಬಿದ್ದಿರುವವು. ಪೂರ್ವಕಾಲದಲ್ಲಿ ಕ್ಷೇತ್ರವು ೩೮೦೦ ಗೃಹಗಳಿಂದ ವಿರಾಜಿಸುತ್ತಿದ್ದಿತೆಂದೂಹಿಸ ಲಭ್ಯಂತರವಿಲ್ಲ.

ಪೂರ್ವಕಾಲದಲ್ಲಿ ಮಹತ್ತರ ವೈಭವದಿಂದ ಬೆಳಗುತ್ತಲಿದ್ದ ಈ ಕ್ಷೇತ್ರವು ಕ್ರಿ. ಶ. ೩ನೇ ಶತಮಾನದಲ್ಲಿ ಇಕ್ಷ್ವಾಕರ ಕಾಲದಲ್ಲಿ ಬೌದ್ಧ, ಶೈವ, ಮತಕಲ

ಹಗಳ ಮೂಲದಿಂದ ನಷ್ಟವಾಯಿತೆನ್ನುತ್ತಾರೆ. ಕ್ರಿ. ಶ. ೬ನೇ ಶತಮಾನದಲ್ಲಿ ಕದಂಬವರ್ಮನು ಶ್ರೀಶೈಲದವರೆಗಿದ್ದ ಅರಣ್ಯರಾಜ್ಯಗಳನ್ನು ಆಕ್ರಮಿಸಿಕೊಂಡಂತೆ ಶಾಸನಗಳಿರುವವು. ಇದು ಚಾಳುಕ್ಯರ ಕಾಲದಲ್ಲಿ ಪುನರುದ್ಧರಿಸಲ್ಪಟ್ಟು ಕಾಕತೀಯರ ಕಾಲದಲ್ಲಿ ಅತ್ಯದ್ಭುತವಾದ ಅಭಿವೃದ್ಧಿ ಹೊಂದಿದೆ. ತುರುಷ್ಕರ ಕಾಲದಲ್ಲಿ ಕ್ಷೀಣದೆಶೆಗೆ ಬಂದು ರೋಹಿಲ್ಲಾವದರ ದಾಳಿಯಲ್ಲಿ ಶಿಥಿಲವಾಗಿಹೋಗಿದೆ.

ಈ ಶ್ರೀಶೈಲದ ವಿಷಯವು ಸ್ಕಾಂದಪುರಾಣದಲ್ಲಿರುವದರಿಂದಲೂ, ಪುರಾಣಗಳು ವ್ಯಾಸಕರ್ತೃಕವೆಂದು ಭಾವಿಸಲ್ಪಡುವದರಿಂದಲೂ, ಈ ಕ್ಷೇತ್ರವು ಬಹು ಪ್ರಾಚೀನಕವೆಂದು ನಂಬಬಹುದಾಗಿದೆ. ವ್ಯಾಸಮಹರ್ಷಿಯು ತನ್ನ ಗುರುವಾದ ಘಂಟಾಕರ್ಣ ಶಿವಾಚಾರ್ಯರೊಡನೆ ಕಲೆತು ಇಲ್ಲಿ ತಪವನ್ನಾಚರಿಸಿದಂತೆಯು ಆ ಕಾಲದಲ್ಲಿ ಸ್ಕಾಂದಪುರಾಣಾಂತರ್ಗತ ಶ್ರೀಶೈಲ ಖಂಡವನ್ನು ರಚಿಸಿದಂತೆಯು ಇಲ್ಲಿಯ ಘಂಟಾಕರ್ಣವಂಶವೇ ವ್ಯಾಸಮಹರ್ಷಿಗಳ ಗುರುವಂಶವಾಗಿರುವುದೆಂದೂ ವೀರಶೈವ ಪೀಠಾಧಿಪತಿಗಳು ಕಂಠೋಕ್ತವಾಗಿ ಹೇಳುತ್ತಾರೆ.

ಆದ್ಯ ಶಂಕರಾಚಾರ್ಯರು ತಮ್ಮ ಶಿವಾನಂದಲಹರಿಯಲ್ಲಿರುವ ಎರಡು ಶ್ಲೋಕಗಳಲ್ಲಿ "ಸೇವೇ ಶ್ರೀಗಿರಿ ಮಲ್ಲಿಕಾರ್ಜುನ ಮಹಾಲಿಂಗಂ ಶಿವಾಲಿಂಗಿತವ್" ಎಂದು ಈ ಕ್ಷೇತ್ರವನ್ನು ತ್ರಿಕರಣ ಶುದ್ಧಿಯಿಂದ ಪ್ರಶಂಸೆ ಮಾಡಿರುವರು.

ಈ ಆದ್ಯ ಶಂಕರಾಚಾರ್ಯರು ಮಾತ್ರವಲ್ಲದೆ, ವೀರಶೈವಮತ ಸ್ಥಾಪನಾಚಾರ್ಯರಾದ ರೇಣುಕಾದಿ ಪಂಚಾಚಾರ್ಯರು, ಬಸವಾದಿಪ್ರಮಥರು, ಗೋರಕ್ಷನೇ ಮುಂತಾದ ನವನಾಥಸಿದ್ಧರು, ಹೈಂದವ ಮಹಿಳಾರತ್ನಗಳಲ್ಲಿಯೇ ಮಕುಟಮಣಿ ಭೂಷಣಸ್ವರೂಪಿಣಿಯಾಗಿ ಬ್ರಹ್ಮಚಾರಿಣಿಯೆನಿಸಿ, ಈ ಪ್ರಪಂಚದ ಸುಖಗಳನ್ನೆಲ್ಲವೂ ತೃಣಸಮಾನವೆಂದೆಣಿಸಿದ ಅಕ್ಕಮಹಾದೇವಿಯು, ಹೇಮರಡ್ಡಿ ಮಲ್ಲಮ್ಮ ಮುಂತಾದವರು ಸಹ ಈ ಪವಿತ್ರ ಕ್ಷೇತ್ರದಲ್ಲಿ ತಪಸ್ಸನ್ನಾಚರಿಸಿ ಸಿದ್ಧಿಹೊಂದಿದಂತೆ ತಿಳಿಯುತ್ತದೆ. ಇದಲ್ಲದೆ ಶಾತವಾಹನ ರಾಜರೀಕ್ಷೇತ್ರಕ್ಕೆ ಬಂದು, ಇಲ್ಲಿಯ ರಸಸಿದ್ಧರ ಮೂಲಕವಾಗಿ ಅಪಾರವಾದ ಬೆಳ್ಳಿ–ಬಂಗಾರವನ್ನು ಸಂಗ್ರಹಿಸಿಕೊಂಡು ತಮ್ಮ ರಾಜ್ಯರಕ್ಷಣೆಗಾಗಿ ಮೇಲಣ

ಸುವರ್ಣಾದಿಗಳನ್ನು ವಿನಿಯೋಗಿಸಿದಂತೆ ರಸವಾದ ಗ್ರಂಥಗಳಿಂದ ತಿಳಿಯ ಬರುತ್ತದೆ.

ಕ್ರಿ. ಶ. ೭ನೇ ಶತಮಾನದಲ್ಲಿ ಭಾರತ ದೇಶದಲ್ಲಿ ಬಂದ ಯುಹಾನ್ ತ್ಸಾಂಗನೆಂಬ ಚೀನಾ ಯಾತ್ರಿಕನು ಬರೆದ ಲೇಖನಗಳನ್ನು ಹಿಡಿದು ಶ್ರೀಶೈಲ ವನ್ನು, ನಾಗಾರ್ಜುನರನ್ನು ಆತನು ಪ್ರಸ್ತಾಪಿಸಿದಂತೆ ತಿಳಿದುಬರುತ್ತದೆ. ಕ್ರಿ. ಶ. ೧೪ ನೇ ಶತಮಾನದಲ್ಲಿ ಇದ್ದ ಕಾಕತೀಯ ಚಕ್ರವರ್ತಿ ಪ್ರತಾಪರುದ್ರ ದೇವನೇ ಮೊದಲ್ಗೊಂಡು ರಾಮದೇವನವರೆಗೂ ನಲವತ್ತಕ್ಕು ಮೇಲ್ಪಟ್ಟ ಶಾಸನಗಳು ಶ್ರೀಶೈಲ ದೇವಸ್ಥಾನದಲ್ಲಿ ಕಂಡು ಬರುತ್ತಿವೆ. ಆ ಶಾಸನಗಳಿಂದ ಹಲವು ವಿಷಯಗಳನ್ನು ತಿಳಿದುಕೊಳ್ಳಬಹುದಾಗಿದೆ.

೧೪ ನೇ ಶತಮಾನದ ಪ್ರಾರಂಭದಲ್ಲಿ ಅಲ್ಲಿಯ ನಿರ್ವಹಣಕ್ಕೆ ಸಂಬಂಧಿ ಸಿದ್ದ ಇಲ್ಲಿಯ ಶಾಸನವೇ ಪ್ರಾಚೀನವಾದದ್ದು ಅರಸ ಶೈವಮಠಾಧಿಪತಿ ಈಶ್ವರ ಶಿವಾಚಾರ್ಯರು ಇನ್ನು ಕೆಲಬರಧಿಕಾರಿಗಳು ಶ್ರೀಶೈಲ ಕಾರ್ಯನಿರ್ವ ಹಣವನ್ನು ಮಾಡುತ್ತಿದ್ದ ಹಾಗೆ ಈ ಶಾಸನಗಳಿಂದ ವಿದಿತವಾಗುತ್ತದೆ. ಮತ್ತು ಇದರಲ್ಲಿ ದೇವಾಲಯಕ್ಕೆ ಕೊಟ್ಟ ಎಪ್ಪತ್ತು ಗ್ರಾಮಗಳ ಹೆಸರುಗಳೂ ತೆಲಗುದೇಶದ ರಾಜರ ಹೆಸರುಗಳೂ, ನಾಯಕರ ನಾಮಧೇಯಗಳೂ, ಇದ ರಲ್ಲಿ ಉದಹರಿಸಲ್ಪಟ್ಟವೆ.

ಎರಡನೆಯದು ಜಗನೊಬ್ಬ ಗಂಡಬಿರುದಾಂಕಿತನಾದ ಕೊಂಡ ವೀಟಿ ಪ್ರಭುವು ಅನವೇಮಾರೆಡ್ಡಿ ಶಾಸನವು ಆತನಿಲ್ಲಿ ವೀರಮಂಟಪವನ್ನು ಕಟ್ಟಿಸಿದ ವೃತ್ತಾಂತವೀ ಶಾಸನದಲ್ಲಿರುವದು. ಆ ಶಾಸನದ ಕೆಲವು ಭಾಗ ಈ ರೀತಿ ಯಾಗಿರುವದು.

ಶ್ರೀಪರ್ವತ ಸ್ಥಲಿಚೆಲುವಗು ಶ್ರೀಮಲ್ಲಿಕಾರ್ಜುನಸ್ವಾಮಿಗೇ ಹಾಂಗಣ ಮುನ ಮಹನಿಯಮಗು ವೀರಮಂಟಪಮು ಅನೇಕ ಪ್ಲವಿಲಸಿತಂಬಗೂ ಪುಣ್ಯ ಸ್ಥಲಿ ನೊಪ್ಪ ಕಟ್ಟಿಂಚಿ ಜಗನೊಬ್ಬ ಗಂಡ್ಡನ್ನ ವೇಮಭೂವಿಭುನಿ........ಶ್ವರ ಧರ್ಮವಿಭವ ಕೀರ್ತಿ ಸಕಲ ದಿಕ್ಕುಲು ನಿಂಡಿ ಸಾಂದ್ರಮೈ ಆ ಚಂದ್ರತಾರಕಂ ಸ್ತಿತಿನುರ್ವಿತನರಂ ಜೇಸೆಶಂಕರಾ........ಅನ್ನವೇಮಯ ರೆಡ್ಡಿಂಗಾರಿಕಿ ತಮ

ತಂಡ್ರಿ ಅನ್ನಯ ರೆಡ್ಡಿಂಗಾರಿಕೆ ಪುಣ್ಯಮುಗಾ ಕಟ್ಟಿಂಚೇ........ಮಂಡಪಮಾ ಅನುನದಿ ಆ ಶಾಸನಮುಲೋ ನಿಕೊಂತ ಭಾಗಮು.

ಇದಲ್ಲದೆ ಪಾತಾಳಗಂಗೆಗೆ ಹೋಗುವ ಮಾರ್ಗದಲ್ಲಿ ಮೂರು ಕಂಬಗಳ ಮೇಲೆ ನಾಗರಿ, ಗ್ರಂಥಾಕ್ಷರಿ, ತೆಲುಗು ಲಿಪಿಗಳಲ್ಲಿ ಕೆತ್ತಿದ ಶಾಸನಗಳಿರುವವು. ಆ ಶಾಸನಗಳಾಧಾರದಿಂದ ಆ ಸ್ಥಳಕ್ಕೆ ಹೋಗಲು ಕದಂಬರಾಜಪುತ್ರಿ ವಿಠಲಾಂಬಿಯು ೧೪ ನೇ ಶತಮಾನದ ಕೊನೆಯಲ್ಲಿ ಸೋಪಾನಗಳನ್ನು ಕಟ್ಟಿಸಿದಂತೆ ತಿಳಿಯುತ್ತದೆ.

ಉಭಯ ಪಾರ್ಶ್ವಗಳ ಆವರಣಗಳಿಂದಲೂ, ದೊಡ್ಡ ಕಲ್ಲುಕಂಬಗಳಿಂದಲೂ, ಮಹಾದ್ವಾರದಿಂದಲೂ,ಆಲಯಮುಖಮಂಟಪವನ್ನು ಶಾಲಿವಾಹನ ಶಕೆ ೧೩೨೬ ಕ್ಕೆ ಸರಿಯಾದ ಶ್ರೀ ಶ. ೧೪೦೪-೧೪೦೫ ರಲ್ಲಿ ಪ್ರಬುದ್ಧದೇವರಾಯರೂ ಶ್ರೀಶೈಲ ದೇವಾಲಯವನ್ನು ಸಂದರ್ಶಿಸಿದ ಸಮಯದಲ್ಲಿ ಕಟ್ಟಿಸಿದರು. ಆ ಮಂಟಪವು ಶ್ರೀ ಸ್ವಾಮಿಗಳವರಿಗೆ ಕಾಣಿಕೆಯಾಗಿ ಕಟ್ಟಿಸಲ್ಪಟ್ಟಿತೆಂದು ಹೇಳುತ್ತಾರೆ ಆ ರಾಜರೂ, ತನ್ನ ಸೋದರಿಯನ್ನೂ, ಕೆಲವರು ಪರಿಚಾರಕರನ್ನೂ ಕರೆದುಕೊಂಡು ಬಂದು ಶ್ರೀಮಲ್ಲಿಕಾರ್ಜುನ ಸ್ವಾಮಿಯನ್ನು ದರ್ಶನ ತೆಗೆದುಕೊಂಡರಂತೆ.

ಕ್ರಿ. ಶ. ೧೪೦೨-೧೪೨೦ ಗಳ ಮಧ್ಯದಲ್ಲಿದ್ದ ಪೆದಕೋಮಟಿ ವೇಮಾ ರೆಡ್ಡಿ ಕಾಶೀಯಾತ್ರೆಗೆ ಹೋಗುತ್ತಾ ಪ್ರಥಮದಲ್ಲಿ ಶ್ರೀಶೈಲವನ್ನು ಸಂದರ್ಶಿಸಿದಂತೆ ಶಾಸನದಿಂದ ತಿಳಿಯುತ್ತದೆ.

ವಿಜಯನಗರದ (ಹಂಪಿ) ರಾಜರು ಕೆಲವರು ಸಾಳುವ ವಂಶಸ್ಥರಾಗಿದ್ದವರೂ ಹಂಪಿಯನ್ನು ಪರಿಪಾಲಿಸುತ್ತಿರುವ ವೇಳೆಯಲ್ಲಿ ಅವರು ಮಹಾ ಶಿವಭಕ್ತಿ ಸಂಪನ್ನರಾಗಿದ್ದುದರಿಂದ ಶ್ರೀಶೈಲದ ಮೇಲೆ ಜನೋಪಯೋಗಾರ್ಥವಾಗಿ ಒಂದು ಕೆರೆಯನ್ನು ಅಗಸಿದಂತೆ ತಿಳಿದುಬರುತ್ತದೆ.

ವಿಜಯ ನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ದಕ್ಷಿಣ ದೇಶವನ್ನು ಯೇಕಚ್ಛತ್ರಾಧಿಪತ್ಯದಿಂದಾಳಿದ ಶ್ರೀಕೃಷ್ಣದೇವರಾಯರು ಕಳಿಂಗ ದೇಶಕ್ಕೆ ದಂಡೆತ್ತಿಹೋಗಿ, ಅಲ್ಲಿ ವಿಜಯಧ್ವಜವನ್ನು ಸ್ಥಾಪಿಸಿ ಮರಳಿ ಬರುವ

ಕಾಲಕ್ಕೆ ಶ್ರೀಶೈಲಕ್ಕೆ ಬಂದು ಶ್ರೀಮಲ್ಲಿಕಾರ್ಜುನ ಲಿಂಗವನ್ನು ಸಂದರ್ಶಿಸಿದನು. ಆಗ ಇಲ್ಲಿಯ ರಥಬೀದಿಯ ಎರಡು ಪಕ್ಕಗಳಲ್ಲಿಯೂ ಕೆಲವು ಮಂಟಪ ಗಳನ್ನು ಕಟ್ಟಿಸಿದನು. ಹಲವು ಗ್ರಾಮಗಳನ್ನು ದಾನಮಾಡಿದನು.

ರಾಯರ ಸಾಮಂತನಾದ ಚಂದ್ರಶೇಖರರಾಯನು ಶ್ರೀಶೈಲ ಪ್ರಾಂತಕ್ಕ ಧಿಪತಿಯಾದ ಬಳಿಕ ಶ್ರೀಮಲ್ಲಿಕಾರ್ಜುನ ಸ್ವಾಮಿಗೆ ಬಂಗಾರದ ನಂದಿಯನ್ನು ಪಾರಿತೋಷಕವಾಗಿ ಸಲ್ಲಿಸಿದನು. ಆ ಸಮಯದಲ್ಲೇ ಶಾಂತಲಿಂಗಯ್ಯನೆಂಬ ಬೇರೊಬ್ಬ ಸಾಮಂತನು ಮಲ್ಲಿಕಾರ್ಜುನನಿಗೆ ಬೇರೊಂದು ರಥವನ್ನು ಮಾಡಿಸಿ ಕೊಟ್ಟನು ತೀರ್ಥ ಸಂವಾಸಿಗಳ ಸೌಕರ್ಯಕ್ಕಾಗಿ ಈತನೊಂದು ಕಾಲುವೆ ಯನ್ನು ತೆಗೆಯಿಸಿದನು. ಈ ಶಾಂತಲಿಂಗಯ್ಯನೇ ಜಂಗಮರಿಗೂ, ಬ್ರಾಹ್ಮಣ ರಿಗೂ ಅಗ್ರಹಾರಗಳನ್ನು ಕೊಟ್ಟಂತೆಯೂ, ಮುಖಮಂಟಪದ ಮುಖ್ಯಭಾಗಗ ಳಿಗೆ ಬಂಗಾರದ ನಗಿಷೀ ಕೊಡಿಸಿದಂತೆಯೂ, ಪ್ರಾಕಾರವನ್ನು ಪೂರ್ವಭಾಗದ ಲ್ಲಿದ್ದ ಗೋಪುರವನ್ನು ಪುನರುದ್ಧರಿಸಿದಂತೆಯೂ, ಅಲ್ಲಿದ್ದ ಮಹಾಜನರಿಗೆ ಮತ್ತು ಕೆಲವು ಭೂದಾನಗಳು ಮಾಡಿದಂತೆಯೂ ಸಾಕ್ಷ್ಯಗಳಿರುವವು. ವರ್ತಕ ಸಂಘ ಗಳವರು ಮಲ್ಲಿಕಾರ್ಜುನಸ್ವಾಮಿಯ ಆಲಯಕ್ಕೆ ಉದ್ಯಾನವನಗಳನ್ನೇರ್ಪಡಿಸಿ ದಂತೆಯೂ, ಹಲವು ಕೆರೆಗಳನ್ನು ತೋಡಿಸಿದಂತೆಯೂ, ಹಲವು ಭೂಮಿಗಳನ್ನು ದಾನಮಾಡಿದಂತೆಯೂ ತಿಳಿಯುತ್ತದೆ. ಮಹಾರಾಷ್ಟ್ರ ಚಕ್ರವರ್ತಿ ಛತ್ರಪತಿ ಶಿವಾಜಿಯೂ ಈ ದೇವಾಲಯದ ಉತ್ತರ ಗೋಪುರವನ್ನು ನಿರ್ಮಿಸಿದನು. ಈಗಲೂ "ಶಿವಾಜೀ ಗೋಪುರ"ವೆಂದು ಪ್ರಸಿದ್ಧವಾಗಿರುತ್ತದೆ.

ವಿಜಯನಗರ ಸಾಮ್ರಾಜ್ಯವು ಪತನವಾದ ಬಳಿಕ ಶ್ರೀಶೈಲ ದೇವಸ್ಥಾ ನವು ಕ್ಷೀಣದೆಶೆಗೆ ಬಂದಿತು. ೧೮ ನೇ ಶತಮಾನದಲ್ಲಿ ಮನ್ನಾವತ್‌ಖಾನನು ಪರಿಪಾಲನೆಮಾಡುತ್ತಿರುವಾಗ ಕಳ್ಳರು ಶ್ರೀ ದೇವಾಲಯವನ್ನೇ ಮುತ್ತಿ ದಾಳಿ ಮಾಡಿದರು. ಅದಕ್ಕಿಂತಲೂ ಪೂರ್ವದಲ್ಲಿ ಅಲ್ಪಸಂಖ್ಯಾತರಾಗಿ ನಿವಾಸ ಮಾಡುತ್ತಿದ್ದ ಜನರು ಸಹಾ ಚೋರರ ಭಯದಿಂದ ಈ ಕ್ಷೇತ್ರವನ್ನು ಬಿಟ್ಟು ತಮಗನುಕೂಲವಾಗಿ ನಿರ್ಭಯವಾದ ಸ್ಥಳಕ್ಕೆ ಹೋದರು.

ಕ್ರಿ. ಶ. ೧೮೦೦ಳ ನೇ ಶತಮಾನದಲ್ಲಿ ಕರ್ನಲ್ ಕಾಲಿನ್ ಮೆಕಂಜಿಯು ಇಲ್ಲಿಗೆ ಸ್ವತಃ ಬಂದು ನೋಡಿದ ವಿಷಯಗಳು ಕರ್ನೂಲ ಜಿಲ್ಲೆಯ ಮ್ಯಾನ್ಯು

ಯುಲ್‌ದಲ್ಲಿ ವಿವರಿಸಲ್ಪಟ್ಟವೆ. ಆ ವಿಷಯಗಳೂ ಆಗಿನ ದೇವಾಲಯದ ಶೋಚನೀಯ ಸ್ಥಿತಿಯನ್ನು ತಿಳಿಸುತ್ತಿರುವವು.

ಅಂತಹ ಕ್ಷೀಣ ಸ್ಥಿತಿಯಲ್ಲಿರುವ ಶ್ರೀಗಿರಿ ಕ್ಷೇತ್ರವನ್ನು ಪ್ರಜಾಪ್ರಭುತ್ವದವರು ಕಣ್ತೆರೆದು ಮಹೋನ್ನತವಾದ ಮಹಾತ್ಮವುಳ್ಳ ಶ್ರೀಶೈಲವನ್ನು ಜೀರ್ಣೋದ್ಧಾರ ಮಾಡಲಿಕ್ಕೂ ಪ್ರಜೋಪಯೋಗಕ್ಕನುಕೂಲವಾದ ಮಾರ್ಗಗಳನ್ನು ಪದ್ಧತಿಗಳನ್ನು ಕಲಿಸುವದಕ್ಕೂ, ಕಂಕಣಧಾರಿಗಳಾಗಿ ಕೇಂದ್ರ ಪ್ರಭುತ್ವದವರು, ಆಂಧ್ರಪ್ರಭುತ್ವದವರು ಪ್ರಪ್ರಥಮದಲ್ಲಿ ಜನಸಂಚಾರಕ್ಕೆ ದುರ್ಗಮವಾದ ಮಾರ್ಗವನ್ನು ಸುಗಮಮಾಡಲು ನಿಶ್ಚಯಿಸಿ ಈಗ ಹಲವು ಜನರು ಹರ್ಷದಿಂದ ಮಾರ್ಗಕ್ರಮಿಸಲಿಕ್ಕೆ ಅನುಕೂಲ ಮಾಡಿಕೊಟ್ಟಿರುವರು. ಅನೇಕರು ಈ ಮಾರ್ಗವನ್ನು ಅನೇಕ ಪ್ರಕಾರವಾಗಿ ವರ್ಣಿಸಲಾರಂಭಿಸಿರುವರು. ಅತ್ಯಂತ ವಕ್ರಮಾರ್ಗಗಳನ್ನು ಸರಿಪಡಿಸಿ ನಾಡಿನ ಜನಾಂಗವೆಲ್ಲವು ನಾನಾ ಪರಿಯಿಂದ ಸ್ತುತಿಸುತ್ತಾ ಪ್ರಭುತ್ವವನ್ನು, ಪ್ರಭುತ್ವದ ಯೋಜನೆಯನ್ನು ಕುರಿತು ಚರ್ಚಿಸುತ್ತಾ ಹಾದಿನಡೆಯುತ್ತಿರುವರು. ಮೂರು-ನಾಲ್ಕು ದಿವಸ ಪರಿ ಪರಿ ಶ್ರಮದಿಂದ ನಡೆದುಹೋಗಬೇಕಾದ ಹಾದಿಯು ಮೂರು-ನಾಲ್ಕು ಗಂಟೆಗಳ ಕಾಲದಲ್ಲಿ ವಿದ್ಯುಚ್ಛಕ್ತಿಶಕಟ (ಮೋಟಾರು) ಮೂಲಕ ಶ್ರೀಶೈಲ ಮಲ್ಲೇಶಾ ? ಶ್ರೀಗಿರಿ ಮಲ್ಲಿಕಾರ್ಜುನಾ ! ಎಷ್ಟೋ ದುರ್ಗಮವಾದ ಹಾದಿಯನ್ನು ಬಹುಸುಗಮವಾಗಿ ಮಾಡಲು ಪ್ರಭುತ್ವದ ಮಾನಸವನ್ನಾಕರ್ಷಿಸಿದೆ ? ನಾವು ಧನ್ಯರಾದೆವು. ನಮಗೆ ಮಧುರತರವಾದ ನಿನ್ನ ದರ್ಶನಕ್ಕನುಕೂಲವಾಯಿತು ಶಂಭೋ ! ಮಹಾದೇವಾ ! ಎಂದು ಬಣ್ಣಿಸುತ್ತಲಿರುವರು. ಇದಲ್ಲದೇ ಪ್ರಭುತ್ವದವರ ಈ ನೂತನ ಯೋಜನೆಯನ್ನು ಕಂಡು ಪ್ರಾಚೀನ ಕಾಲದಿಂದಲೂ ಶ್ರೀಶೈಲದಧಿಕಾರಿಗಳಾಗಿದ್ದ ಭಿಕ್ಷಾವೃತ್ತಿಮಠದ ವೀರಶೈವ ಜಗದ್ಗುರುಗಳೂ ಅನೇಕಾನೇಕ ಸಂಪನ್ನ ಗೃಹಸ್ಥರು ಪ್ರಭುತ್ವದ ಕಾರ್ಯಗಳಿಗೆ ವಾಕ್ಸಹಾಯ, ಧನಸಹಾಯ, ಜನಸಹಾಯಮಾಡುತ್ತಿರುವರು. ಸದ್ಯದ ಸ್ಥಿತಿಯು ಹೀಗೆ ಬದಲಾವಣೆ ಹೊಂದತೊಡಗಿರುವದರಿಂದ ಶ್ರೀಶೈಲ ಮಹಾತ್ಮ್ಯವು ಪುನರುಜ್ಜೀವಿತವಾಗಿ ಪರಿ ಪರಿ ಮಾರ್ಗಗಳಿಂದ, ನವ ನವ ಮಾರ್ಗಗಳಿಂದ ಶೋಭಿಸುತ್ತಾ ಪ್ರಾಚೀನ ಸೌಂದರ್ಯವನ್ನು ಹೊಂದುವುದಕ್ಕೆ ಸಕ್ರಮ

ಮಾರ್ಗಗಳಿಗೆ ಸಮೀಚೀನವಾದ ಕಾಲವು ಸಂಪ್ರಾಪ್ತವಾಯಿತೆಂದೂಹಿಸಲು ನಂಬುಗೆಯಾದ ಸೂಚನೆಯೆಂದು ತಿಳಿಯಬಹುದಾಗಿದೆ.



## ಕಾವ್ಯಗಳಲ್ಲಿ ಶ್ರೀಶೈಲ ವರ್ಣನೆ

ಪಂಚಮವೇದವೆಂದು ಪ್ರಸಿದ್ಧವಾದ ಮಹಾಭಾರತದಲ್ಲಿ ವೇದವ್ಯಾಸರು ಅರ್ಜುನ ತೀರ್ಥಯಾತ್ರಾ ಸಂದರ್ಭವನ್ನು ವರ್ಣಿಸುತ್ತಾ ಈ ಕ್ಷೇತ್ರ ಸಂದರ್ಶನ ದಿಂದ ಬೇರೆಯಾಗಿ ಅರ್ಜುನನು ಪರಿಪರಿ ವಿಧದಿಂದ ಶ್ರೀಗಿರಿಯನ್ನು ವರ್ಣಿಸಿದ ನೆಂತಲು ಇನ್ನು ಆಂಧ್ರವಾಗನುಶಾಸನವೆಂದು ಪ್ರಸಿದ್ಧವಾದ ಮತ್ತು ಆದಿಕವಿ ಯೆಂದು ಹೆಸರ್ಗೊಂಡ, ಆಂಧ್ರಕವಿತ್ರಯಗಳಲ್ಲಿ ಪ್ರಪ್ರಥಮನಾದ "ನನ್ನಯ ಭಟ್ಟ"ಯೆಂಬ ಕವಿಯು ಆಂಧ್ರ ಮಹಾಭಾರತ ರಚನಾ ದಕ್ಷನಾಗಿ ಶ್ರೀಶೈಲ ಪರ್ವತವನ್ನು ವರ್ಣಿಸಿರುವದೇನಾಶ್ಚರ್ಯವು ? ಆಂಧ್ರ, ಕರ್ನಾಟಕ ದ್ರಾವಿಡ ಕವಿಗಳೆಲ್ಲರು ಶ್ರೀಶೈಲ ಮಲ್ಲಿಕಾರ್ಜುನನನ್ನು ಹಲವು ಬಗೆಯಿಂದ ತಮ್ಮ ತಮ್ಮ ಗ್ರಂಥಗಳಲ್ಲಿ ಸ್ತುತಿಸಿರುವರು. ಶೈವಪಂಡಿತತ್ರಯಗಳಲ್ಲಿ ಪ್ರಧಾನ ಕವಿಯಾದ ಶ್ರೀ ಪಂಡಿತಾರಾಧ್ಯನು ಸಂಸ್ಕೃತ ಭಾಷೆಯಲ್ಲಿ "ಸ್ತುತಿಶ್ಲೋಕ ಪಂಚಕ" ಪರ್ವ ತವರ್ಣಕಯೆಂಬ ಗ್ರಂಥಗಳನ್ನು ಶ್ರೀಶೈಲ ಸಂಬಂಧವಾದ ವಿಷಯಗಳಿಂದಲೇ ಅಭಿವರ್ಣಿಸಿರುವನು. ಸ್ತುತಿಶ್ಲೋಕಪಂಚಕವು "ತಸ್ಮೈನಮಃ ಶ್ರೀಗಿರಿ ವಲ್ಲಭಾಯ" ಎಂಬ ಮಕುಟದಿಂದ ವರ್ಣಿತವಾಗಿ ಪ್ರಸಿದ್ಧವಾಗಿರುವದು.

ಆಂಧ್ರದ ಕವಿಗಳ ಸಮುದಾಯದಲ್ಲಿ ಕವಿರಾಜ ಶಿಖಾಮಣಿಯೆಂಬ ಬಿರುದನ್ನು ತಾಳಿದ್ದ ನನ್ನೆಚೋಡದೇವಕವಿ ತಾನು ರಚಿಸಿದ 'ಕುಮಾರಸಂಭವ' ವೆಂಬ ಕಾವ್ಯವನ್ನು ಗುರುವಾದ ಮಲ್ಲಿಕಾರ್ಜುನನಿಗೆ ಕೃತಿಯನ್ನು ಕೊಡುತ್ತಾ ತನ್ನ ಗುರುವಿಗೂ, ಮಲ್ಲಿಕಾರ್ಜುನ ದೇವನಿಗೂ ಅಭೇದವನ್ನು ವಿಶದಗೊಳಿ ಸಿರುವನು.

ಸುಪ್ರಸಿದ್ಧ ಶಿವಕವಿಲಲಾಮನಾದ ಪಾಲ್ಕುರಿಕಿ ಸೋಮನಾಥನು ತನ್ನ ಬಸವ ಪುರಾಣದಲ್ಲಿಯೂ ಪಂಡಿತಾರಾಧ್ಯ ಚರಿತ್ರೆಯಲ್ಲಿಯೂ ಶ್ರೀಶೈಲವನ್ನು

ಬಗೆಬಗೆಯಾಗಿ ವರ್ಣಿಸಿರುವನು. ಈ ಎರಡೂ ಗ್ರಂಥಗಳನ್ನೀತನು ಶ್ರೀಶೈಲ ದಲ್ಲಿದ್ದುಕೊಂಡೇ ರಚಿಸಿರುವನು ಬಸವಪುರಾಣದಲ್ಲಿ–

ಸಕಲತೀರ್ಥಮುಲಕು ಜನಯತ್ರಿಯಗುಚು
ಬ್ರಕಟಿಂಪನೊಪ್ಪು ಶ್ರೀಪರ್ವತೇಂದ್ರಂಬು

ಯೆಂದು ಶ್ರೀಶೈಲವು ಬಣ್ಣಿಸಲ್ಪಟ್ಟಿರುವದು. ಪಂಡಿತಾರಾಧ್ಯ ಚರಿತ್ರೆಯಲ್ಲಿ ಈ ಕ್ಷೇತ್ರವನ್ನು ಕುರಿತು "ಪರ್ವತ ಪ್ರಕರಣಮು" ಯೆಂಬ ಹೆಸರಿನಿಂದ ಪ್ರತ್ಯೇಕ ವಾದ ಪ್ರಕರಣವನ್ನೇ ಬರೆದಿರುವನು. ಆ ಪ್ರಕರಣದಲ್ಲಿ ಶ್ರೀಶೈಲ ಮಹಾ ತ್ಮ್ಯವು ವಿಸ್ತಾರವಾಗಿ ವಿವರಿಸಲ್ಪಟ್ಟಿರುವದು.

ಚಕ್ರಪಾಣಿ ರಂಗನಾಥ ಕವಿ 'ಶ್ರೀಗಿರಿನಾಥ ವಿಕ್ರಮು' ಯೆಂಬ ನೂರು ಸೀಸ ಪದ್ಯಗಳ ಗ್ರಂಥವನ್ನು ರಚಿಸಿದಂತೆ ತಿಳಿಯಬರುತ್ತದೆ. ಈ ರಂಗನಾಥ ಕವಿಯು ಪ್ರಥಮದಲ್ಲಿ ವೈಷ್ಣವನಾಗಿದ್ದು ಶಿವನನ್ನು ದೂಷಿಸಲಾರಂಭಿಸಿದುದ ರಿಂದ ನೇತ್ರವಿಹೀನನಾದನು. ನಂತರ ಶಿವನನ್ನು ಕುರಿತು ಪುನಃ ಪುನಃ ಸ್ತುತಿಸಿ ಮರಳಿ ನೇತ್ರಗಳನ್ನು ಪಡೆದನಂತೆ, ಇಷ್ಟೇ ಅಲ್ಲದೆ ಈ ಕವಿಯು ಭಕ್ತ್ಯತಿಶಯದಿಂದ ಮೇಲಣ ಗ್ರಂಥವನ್ನಲ್ಲದೇ ಶಿವಭಕ್ತದೀಪಕರಂಡ ನಮಃಶ್ಶಿ ವಾಯರಗಡ ಎರಡು ಗ್ರಂಥಗಳನ್ನು ಶ್ರೀಗಿರಿ ಮಲ್ಲಿಕಾರ್ಜುನನ ಸ್ತುತಿರೂಪಕ ವಾಗಿಯೇ ಬರೆದಿರುವನು.

ಶ್ರೀಗಿರಿಯೆಂಬ ಕವಿಯು 'ಶ್ರೀಗಿರೀಶ' ಯೆಂಬ ಮಕುಟದಿಂದ ಒಂದು ಶತಕವನ್ನು ರಚಿಸಿರುವನೆಂದು ತಿಳಿಯುತ್ತದೆ. ರಾವಿಪಾಟಿ ತ್ರಿಪುರಾಂತಕನು ರಚಿಸಿದ ತ್ರಿಪುರಾಂತಕೋಡಾಹರಣವೆಂಬುದರಲ್ಲಿ ಶ್ರೀಶೈಲ ಪ್ರಶಂಸೆ ಬಹಳ ವಾಗಿರುವದು. ಈ ಉದಾಹರಣದಲ್ಲಿ ಶ್ರೀಶೈಲಕ್ಕೆ ಇರುವ ನಾಲ್ಕು ದ್ವಾರಗಳಲ್ಲಿ ಒಂದಾದ ತ್ರಿಪುರಾಂತಕ ಗ್ರಂಥದಲ್ಲಿ ತ್ರಿಪುರಾಂತಕದೇವನ ಸ್ತುತಿ ಇರುವದು.

ಕವಿಸಾರ್ವಭೌಮನಾದ ಶ್ರೀನಾಥನು ರಚಿಸಿರುವ ಕಾಶೀಖಂಡದಲ್ಲಿ ಅಗಸ್ತ್ಯ ಮಹರ್ಷಿಯು ಮಾಡಿದ ತೀರ್ಥಯಾತ್ರಾ ಸಂದರ್ಭದಲ್ಲಿ ಶ್ರೀಶೈಲವರ್ಣನೆಯು ವಿಶೇಷವಾಗಿರವದು. ಮತ್ತು ಶ್ರೀನಾಥನೂ ಶ್ರೀಶೈಲ

ದಲ್ಲಿಯೇ ಕೆಲವುಕಾಲ ವಾಸಮಾಡಿಕೊಂಡು ಶಿವರಾತ್ರಿ ಮಹಾತ್ಮ್ಯವನ್ನು ರಚಿಸಿದಂತೆ ಈ ಕೆಳಗಣ ಅಂಶಗಳಿಂದ ವೇದ್ಯವಾಗುತ್ತದೆ

ಸ್ವಸ್ತಿಶ್ರೀ ಪರ್ವತಸ್ವಯಂಭೂ ಶ್ರೀಲಿಂಗಿ ಚಕ್ರವರ್ತಿ ಶ್ರೀಮನ್ಮಲ್ಲಿಕಾರ್ಜುನ ಶ್ರೀಮಹಾದೇವುನಿ ಮುಖಮಂಡಪಂಬುನ ಸುಖಾಸೀನುಲೈ........ ...........ಯುಂಡ ಶ್ರೀಶಾಂತ ಭಿಕ್ಷಾವೃತ್ತಿಯತೀಶ್ವರುಡು ಶಿವಕಥಾವಿಧಾನಂ ಬುಲಬ್ರೂದ್ದುಲುಪುಚ್ಚುಚು ಮೂಲಭೃತ್ಯುಂಡುಗಪುವ್ವಲ ಮುಮ್ಮಡಿ ದೇವಯ್ಯ ಶಾಂತುನಿಂಗನುಂಗೋನಿ.... ಯೆಂಬ ಅವತಾರಿಕಾ ಭಾಗದಿಂದ ತಿಳಿದುಬರುತ್ತದೆ. ಶ್ರೀಶೈಲದಲ್ಲಿ ಭಿಕ್ಷಾವೃತ್ತಿ ಮಠಾಧ್ಯಕ್ಷನಾದ ಶಾಂತಭಿಕ್ಷಾವೃತ್ತಿಯಪೇಕ್ಷೆಯಂತೆಯೇ ಶ್ರೀನಾಥನು ತನ್ನ ಶಿವರಾತ್ರಿ ಮಹಾತ್ಮ್ಯದಲ್ಲಿ ಆ ಯೋಗಿಗೆ ಮೂಲ ಭೃತ್ಯನಾದ ಪುವ್ವಲ ಶಾಂತಯ್ಯನಿಗೆ ಅಂಕಿತಮಾಡಿರುವನು ಅನುಪಲಬ್ಧವಾದ ಶ್ರೀನಾಥನ ಪಂಡಿತಾರಾಧ್ಯ ಚರಿತ್ರದಲ್ಲಿಯೂ ಶ್ರೀಶೈಲ ಮಹಿಮಾನು ವರ್ಣನೆಯು ಮಹತ್ತರವಾಗಿರಬಹುದೆಂದೂಹಿಸಬಹುದಾಗಿದೆ.

ನಾಗಲೂಟಿ ಶೇಷನಾಥಾರ್ಯನು ಶ್ರೀಶೈಲ ಮಹಾತ್ಮ್ಯವನ್ನು ಶ್ರೀ ಪರ್ವತ ಪುರಾಣವೆಂಬ ಹೆಸರಿನಿಂದ ಪದ್ಯಕಾವ್ಯವಾಗಿ ರಚಿಸಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗೆ ಅಂಕಿತ ಮಾಡಿರುವನು.

ತೆನಾಲಿ ಶ್ರೀಗಿರಿಯೆಂಬ ಕವಿಯು ಶ್ರೀಶೈಲ ಮಹಾತ್ಮ್ಯವನ್ನು ಪದ್ಯ ಕಾವ್ಯವಾಗಿ ರಚಿಸಿದಂತೆ ತಿಳಿದುಬರುತ್ತದೆ.

ತೆಲುಗು ದೇಶಕ್ಕೆ ತ್ರಿಲಿಂಗದೇಶವೆಂಬ ಹೆಸಸು ಪ್ರಸಿದ್ಧವಾಗಿದೆ. ಇದು ಹದ್ದುಗಳನ್ನನುಸರಿಸಿ ಏರ್ಪಾಟಾದಂತೆಯು ಶ್ರೀಶೈಲ, ಕಾಳೇಶ್ವರ, ದಾಕ್ಷಾರಾಮಯೆಂಬ ಮೂರು ಕ್ಷೇತ್ರಗಳಿಗೆ ಮಧ್ಯದಲ್ಲಿರುವ ದೇಶವೇ ತೆಲುಗುದೇಶವಾದಂತೆಯು. ಆ ಕ್ಷೇತ್ರಗಳು ಮೂರರಲ್ಲಿಯು ಶಿವಲಿಂಗಗಳಿರುವದರಿಂದಲೇ ದೇಶಕ್ಕೆ ತ್ರಿಲಿಂಗದೇಶವೆಂಬ ನಾಮವು ಸಿದ್ಧವಾದಂತೆಯು ತಿಳಿದುಬರುತ್ತದೆ.

ವಿನ್ನಕೋಟಪೆದ್ದನ ಕವಿಯಿಂದ ರಚಿತವಾದ ಕಾವ್ಯಾಲಂಕಾರ ಚೂಡಾಮಣಿಯಲ್ಲಿ—

ಕಂ॥ ಧರಶ್ರೀಪರ್ವತ, ಕಾಳೇ
ಶ್ವರ, ದಕ್ಷಾರಾಮಸಂಜ್ಞ, ವರಲದ್ರಿಲಿಂಗಾ

ಕರ ಮಗುಟೆನಾಂಧ್ರದೇಶಂ
ಬರುದಾರದ್ರಿಲಿಂಗದೇಶಮನದಗುಗೃತುಲನ್ ॥
ತತ್ರಿಲಿಂಗಪದಮು ತದ್ಧವಂಬಗುಟಚೇ
ತೆಲುಗುದೇಶ ಮನಗದೇಟಪಡಿಯೆ

.... ಯೆಂದೂ ಆ ಗ್ರಂಥದ ನವವೋಲ್ಲಾಸದಲ್ಲಿ ಉದಹೃತವಾಗಿದೆ.

ಈ ಅಂಶವನ್ನೇ ಆ ಕವಿಗಿಂತಲೂ ಹಿಂದಣವನಾದ ಅಪ್ಪಕವಿಯು ತನ್ನ ಅಪ್ಪಕವೀಯದಲ್ಲಿ ಉದಹರಿಸಿರುವನು. ಆದುದರಿಂದ ಆಂಧ್ರಪ್ರದೇಶಕ್ಕೆ ತ್ರಿಲಿಂಗ ದೇಶವೆಂಬ ಹೆಸರುಂಟಾಗುವುದಕ್ಕೆ ಶ್ರೀಶೈಲದ ಪ್ರಾಧಾನ್ಯತೆ ಸಹಸ್ರ ಮುಖದಿಂದ ವರ್ಣಿಸಲವಕಾಶವಾಯಿತು.

ಆಂಧ್ರದೇಶದ ಪ್ರತಿಗ್ರಾಮದಲ್ಲಿಯೂ ಭ್ರಮರಾಂಭಾಷ್ಟಕವು ಪಾರಾಯಣ ಮಾಡುವದು ಅನೂಚಾನವಾಗಿ ನಡೆದು ಬಂದಿದೆ. ದೊಡ್ಡ ಸಂತರ್ಪಣ ಸಮಾರಾಧನೆಗಳಲ್ಲಿ, ಭೋಜನಾರಂಭ ಕಾಲಕ್ಕೆ ಈ ಅಷ್ಟಕವನ್ನು ಶ್ರಾವ್ಯವಾಗಿ ಪಠಿಸುತ್ತಾ, ಅನ್ನಪೂರ್ಣಾದೇವಿಯನ್ನು ಸ್ತುತಿಸುವ ಪರಂಪರಾಚಾರವು ಇಂದಿಗೂ ಸಂಪ್ರದಾಯಬದ್ಧವಾಗಿರುವದು. ಆ ಕಷ್ಟಗಳೂ ಪಠಿಸಲು, ಪಾರಾಯಣಮಾಡಲು, ಕೇಳಲು ಅದೆಷ್ಟೋ ಶ್ರಾವ್ಯವಾಗಿರುವವು. ಅದರಲ್ಲೊಂದನ್ನು ಓದಿರಿ—

ಅಕ್ಷಯಂಬುಗಕಾಶಿಲೋಪಲ ಅನ್ನಪೂರ್ಣಭವಾನಿವೈ
ಸಾಕ್ಷಿಗಣಪತಿ ಕನ್ನತಲ್ಲಿವಿ ಸದ್ಗುಣಾವತಿಶಾಂಭವೀ
ದೋಕ್ಷವೊಸಗೆಡು ಕನಕದುರ್ಗವು ಮೂಲಕಾರಣಶಕ್ತಿವೀ
ಶಿಕ್ಷಚೇತುವು ಕ್ರೂರಜನುಲನು ಶ್ರೀಗಿರಿ ಭ್ರಮರಾಂಬಿಕಾ

ಈ ಸ್ತುತಿಯ ಶ್ರೀಶೈಲದ ಭ್ರಮರಾಂಬಿಕಾದೇವಿಯ ಸಂಬಂಧವೆಂಬುವದು ಸೂರ್ಯನ ಬೆಳಕಿನಂತೆ ಸ್ಪಷ್ಟವಾಗಿರುವದು.

ಆಂಧ್ರಗ್ರಂಥಗಳಲ್ಲಿ ಮಾತ್ರವಲ್ಲದೆ ಸಂಸ್ಕೃತ ಗ್ರಂಥಗಳಲ್ಲಿಯೂ, ಕನ್ನಡ ಗ್ರಂಥಗಳಲ್ಲಿಯೂ, ತಮಿಳು ಭಾಷೆಯ ಗ್ರಂಥಗಳಲ್ಲಿಯೂ ಈ ಮಹಾ ಕ್ಷೇತ್ರದ ಪ್ರಶಂಸೆ ನಿಯಮಬದ್ಧವಾಗಿರುವದು.

ಕ್ರಿ. ಶ. ೬–೭ನೇ ಶತಮಾನಗಳಲ್ಲಿ ತೇವಾರಮ್ (ತಮಿಳುಗ್ರಂಥ) ದಲ್ಲಿಯೂ ಸಿದ್ಧನಾಗಾರ್ಜುನನ ರಸರತ್ನಾಕರ ಮುಂತಾದ ಗ್ರಂಥಗಳಲ್ಲಿಯೂ, (ಸಂಸ್ಕೃತ ಈ ಕ್ಷೇತ್ರವರ್ಣನೆಯು ಅಖಂಡವಾಗಿ ಚಿತ್ರಿಸಲ್ಪಟ್ಟಿರುವದು.] ಮತ್ತು ಶ್ರೀ ಯೆಳಂದನೂರು ಪಂಡಿತರಾದ ಶ್ರೀ ಷಡಕ್ಷರ ಕವಿಗಳ ಶ್ರೀ ವೃಷಭೇಂದ್ರ ವಿಜಯದಲ್ಲೂ, ಶ್ರೀ ರಾಘವಾಂಕನ ಕಾವ್ಯದಲ್ಲಿಯೂ ಹರಿಹರನ ರಚನೆಗಳಲ್ಲಿಯೂ, ಶ್ರೀ ಪ್ರಭುಲಿಂಗಲೀಲೆಯಲ್ಲಿಯೂ, ಹೇಮರಡ್ಡಿ ಮಲ್ಲಮ್ಮನ ಪುರಾಣದಲ್ಲಿಯೂ, ರೇವಣಸಾಂಗತ್ಯದಲ್ಲಿಯೂ, ಶ್ರೀಮನ್ನಿಜಗುಣ ಶಿವಯೋಗಿ ಗಳ ವಿವೇಕ ಚಿಂತಾಮಣಿಯಲ್ಲಿಯೂ, ಶ್ರೀ ಸರ್ಪಭೂಷಣ ಶಿವಯೋಗಿಗಳ ಕೈವಲ್ಯದಲ್ಲಿಯೂ ಶ್ರೀ ರೇಣುಕ ವಿಜಯದಲ್ಲಿಯೂ, ಶಿವರಾತ್ರಿ ಮಹಿಮೆಯ ಲ್ಲಿಯೂ, ಅಕ್ಕಮಹಾದೇವಿಯ ವಚನಗಳಲ್ಲಿಯೂ ಇನ್ನು ಅನೇಕಾನೇಕ ಕನ್ನಡ ಗ್ರಂಥಗಳಲ್ಲಿಯೂ ಶ್ರೀಶೈಲ ಮಲ್ಲಿಕಾರ್ಜುನನನ್ನು ಸ್ತುತಿಮಾಡಿಯೇ ತಂತಮ್ಮ ಕವಿತ್ವರಚನೆಯನ್ನು ಶ್ರಾವ್ಯವಾಗಿ ಮಾಡಿರುವರು. ಹೀಗಿರುವದ ರಿಂದ ದಕ್ಷಿಣದೇಶದ ಭಾಷೆಗಳಲ್ಲಿ ಶ್ರೀ ಶೈಲಕ್ಷೇತ್ರ ಪ್ರಭಾವವು ಬಹು ಮುಖ ಗಳಿಂದ ವರ್ಣಿಸಲ್ಪಟ್ಟಿರುವದೆಂದು ಘಂಟಾಘೋಷವಾಗಿ ಹೇಳಬಹುದಾಗಿದೆ.

## ರಸಸಿದ್ಧರು, ಶ್ರೀಶೈಲವು

———

ಶ್ರೀಶೈಲ ಮಹಾಕ್ಷೇತ್ರವು ಯೋಗಿಗಳಿಗೂ, ಪೀಠಾಧಿಪತಿಗಳಿಗೂ, ಮಹಾ ಭಕ್ತರಿಗೂ ನಿವಾಸವಾಗಿದ್ದಂತೆಯೇ ಸಿದ್ಧರಿಗೆ ಸಹಾ ಸಮೀಚೀನವಾಗಿ ನೆಲೆವೀಡಾಗಿದ್ದಂತೆ ಕಂಡು ಬರುತ್ತದೆ. ಇಲ್ಲಿಯ ಬೆಟ್ಟಗಳ ಮೇಲೆ ಅತ್ಯಂತಾ ದ್ಭುತ ಶಕ್ತಿಯನ್ನುಂಟುಮಾಡುವವನಂಷಧಿಗಳು, ಅಭ್ರಕವು, ತಾಳಕವು,ಮಣಿ ಶಿಲೆ, ಕಲ್ಲುಹೂವು, ಕಲ್ಲನಾರು, ಶಿಲಾಜಿತ್ತು, ಸ್ಫಟಿಕವು, ಲೋಹವೂಕಾಂತವು ಮುಂತಾದ ಪದಾರ್ಥಗಳಿರುವವು. ಸಿದ್ಧರು, ವೈದ್ಯರು ಅಪೂರ್ವಗಳಾದ ಸಾಧನೆಗಳು ಮಾಡಿ ಇವುಗಳಿಂದ ದೊಡ್ಡ ಲಾಭವನ್ನು ಪಡೆಯುತ್ತಿದ್ದರೆಂದು ವೇದ್ಯವಾಗುತ್ತದೆ.

ಶ್ರೀನಾಥನು ತನ್ನ ಕಾಶೀಖಂಡ ಕಾವ್ಯದಲ್ಲಿ ಪ್ರಕಾರ ಕ್ಷೇತ್ರವರ್ಣನೆ ಮಾಡಿರುವನು.

ರಸಸಿದ್ಧಿ, ರಸಾಯನಸಿದ್ಧಿ, ಮೂಲಿಕಾಸಿದ್ಧಿ, ಪಾದುಕಾಸಿಧ್ಯಾದಿಗಳೆಂಬ ಸಿದ್ಧಿ, ಕ್ಷೇತ್ರಗಳಿಂದಲೂ ಸುಶೋಭಿತವಾಗಿ ದಿವ್ಯಾಮೃತನಿರ್ಮಲ ಶ್ರೀಸ್ವಯಂ ಜ್ಯೋತಿರ್ಲಿಂಗ ಮೂರ್ತಿಯಾದ ಮಲ್ಲಿಕಾರ್ಜುನ ಶ್ರೀಮನ್ಮಹಾದೇವನಿಗೆ ನಿವಾಸವಾದ ಮಹದಭಿರಾಮವಾದ, ದಿವ್ಯವಾದ ಶ್ರೀಶೈಲವನ್ನು ಸಮೀಪಿಸಿ-ದನು. ಯೆಂದು ಸಿದ್ಧರ ವಿಷಯವಾಗಿ ತಿಳುಹಿಸಿರುವನು.

ಸಿದ್ಧನಾಗಾರ್ಜುನನ ಕಾಲದಲ್ಲಿಯೂ ಕ್ಷೇತ್ರವು ಸಿದ್ಧರಿಗೆ ಪ್ರಸಿದ್ಧವಾದುದು. ಅವರ ಪರಿಶೋಧನಾಗಾರದಲ್ಲಿಯೇ ಯಿದ್ದಂತೆ ಊಹಿಸಲವಕಾಶವಾಗಿರುವದು. ಅವರು ಕಾಯಕಲ್ಪವೇ ಮುಂತಾದ ರಸಾಯನ ಪದ್ಧತಿಗಳ ಮೂಲವಾಗಿ ಶರೀರಕ್ಕೆ ದೃಢತ್ವವು, ಮನೋನಿಗ್ರಹವು, ಇಂದ್ರಿಯ ಸ್ವಾಧೀನತೆಯು, ಆಯುರ್ವೃದ್ಧಿ ಮುಂತಾದ ಸಿದ್ಧಿಗಳನ್ನು ಸಂಪಾದಿಸಿಕೊಳ್ಳುತ್ತಿದ್ದರು. ಇಷ್ಟೇ ಅಲ್ಲದೆ ವಾಯುಗಮನ ಸ್ವೇಚ್ಛಾಗಮನ ಮುಂತಾದ ಅಸಾಧ್ಯ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು.

ಈ ವಿಷಯಗಳೂ ಸಿದ್ಧನಾಗಾರ್ಜುನನ ಕಕ್ಷಪುಟ ನಿತ್ಯಸಾಧನ, ರಸರತ್ನಾಕರ ಮುಂತಾದ ತಾಂತ್ರಿಕ ಗ್ರಂಥಗಳಲ್ಲಿ ರಾಸಾಯನಿಕ ಪದ್ದತಿಗಳೂ, ಸಿದ್ಧಪ್ರಾಪ್ತಿವಿಧಾನಗಳೂ ಆಯುರ್ವೃದ್ಧಿಕರಂಗಳಾದ ಚಿಕಿತ್ಸೆಗಳೂ, ಆಕಾಶಗಮನಾದಿ ಪದ್ಧತಿಗಳೂ, ವೀರ್ಯವೃದ್ಧಿ ಜ್ಞಾನವೃದ್ಧಿ ಮುಂತಾದ ಅಭಿವೃದ್ಧಿಕಾರಕ ಸುಲಭೋಪಾಯಗಳನ್ನು ಯೆಲ್ಲರಿಗೂ ಸುಲಭವಾಗಿ ತಿಳಿಯುವಂತೆ ವಿವರಿಸಲ್ಪಟ್ಟಿರುವವು. ಸಿದ್ಧರು ತಮ್ಮ ಪರಿಶೋಧನೆಗಳ ಮೂಲಕವಾಗಿ ಹೊರಬಿದ್ದ ಸಾರಾಂಶಗಳನ್ನು ಲೋಕಹಿತಾರ್ಥವಾಗಿ ಗ್ರಂಥಸ್ಥಮಾಡಿರುವರು. ಆ ವಿಷಯಗಳೆಲ್ಲವೂ ನೋಡಲಾಗಿ ನಮಗೀಕಾಲದಲ್ಲಿ ಆಶ್ಚರ್ಯವನ್ನುಂಟು ಮಾಡುತ್ತಲಿವೆ. ಆದರೆ ಪ್ರಾಚೀನ ಕಾಲದಲ್ಲಿ ಆ ಪದ್ಧತಿಗಳು ಪ್ರಯೋಜನಕಾರಿಗಳಾಗಿದ್ದವೆಂದು ನಂಬಬಹುದಾಗಿದೆ.

ನಿತ್ಯ ಸಾಧನ ರಸರತ್ನಾಕರದಲ್ಲಿಯ ರಸಾಯನ ಖಂಡದಲ್ಲಿ ಶ್ರೀಶೈಲ ಕ್ಷೇತ್ರವು ರಾಸಾಯನಿಕ ಪರಿಶೋಧನಾಗಾರವಾಗಿದ್ದಂತೆಯು, ಪರಿಶೋಧಕರಿಗೆ

ನಿಲಯವಾಗಿದ್ದಂತೆಯು ಹೇಳಲ್ಪಟ್ಟಿರುವದು. ಶ್ರೀಶೈಲದಲ್ಲಿ ತರು, ಗುಲ್ಮ ಲತಾದಿಗಳು ಕಲ್ಯಾಣಪ್ರದವಾದ ಜಲಾದಿಗಳೂ ಎಲ್ಲವೂ ಕಲ್ಯಾಣಪ್ರದವೆಂತಲೂ ಮತ್ತಷ್ಟು ಉಪಯೋಗಕಾರಿಗಳೆಂದೂ ಹೇಳಲ್ಪಟ್ಟಿರುವದು. ಮತ್ತು ರಸಖಂಡಗಳಿರುವ ಸ್ಥಲಗಳೂ, ಅವುಗಳನ್ನು ಗುರ್ತಿಸುವ ವಿಧಾನಗಳೂ, ಉಪಯೋಗಿಸುವ ಪದ್ಧತಿಗಳೂ ವಿಪುಲವಾಗಿ ವಿವರಿಸಲ್ಪಟ್ಟಿರುವವು.

ಆದರೆ ಪ್ರಾಚೀನ ಕಾಲದಲ್ಲಿ ಅವುಗಳನ್ನು ಯಾವ ಯಾವ ಮಹನೀಯರು, ಯಾವ ಯಾವ ಸಿದ್ಧರು, ಯಾವ ಯಾವ ವಿಧವಾಗಿ ಉಪಯೋಗಿಸಿಕೊಂಡರೆಂಬುದು ನಮಗೆ ಸ್ಪಷ್ಟವಾಗಿ ತಿಳಿಯುವಂತಿಲ್ಲ.

ನಮಗೀಗ ಸ್ವರಾಜ್ಯ ಪ್ರಾಪ್ತವಾಗಿದೆ. ಪ್ರಜಾನಾಯಕರೇ ಪ್ರಜೆಗಳ ಸಮ್ಮತಿ ಪಡೆದು ಶಾಸನಸಭೆಗಳಲ್ಲಿ ಪ್ರವೇಶಿಸುತ್ತಾರೆ. ಅಂತಹ ನಾಯಕರು ಈ ಮಹಾಕ್ಷೇತ್ರದಲ್ಲಿರುವ ಸಿದ್ಧರಿದುಪಯೋಗಿಸಲ್ಪಟ್ಟ ಗ್ರಂಥಸ್ಥ ವಿಷಯಗಳನ್ನು ಮಹಾ ಮೇಧಾವಿಗಳಿಂದ, ವೈಜ್ಞಾನಿಕರ ಸಹಾಯದಿಂದ, ಯಾವ ಯಾವ ಪದಾರ್ಥಗಳು ಜನೋಪಯೋಗವಾದವುಗಳೋ ಯೋಚಿಸಿ, ಕೋಟ್ಯಾವಧಿ ಹಣವನ್ನು ಮಿಕ್ಕಕಾರ್ಯಗಳಿಗುಪಯೋಗಿಸುವುದನ್ನು ಬದಿಗಿರಿಸಿ ಈ ಶ್ರೀ ಶೈಲದಲ್ಲಿ ಒಂದು ಪರಿಶೋಧನಾ ಕೇಂದ್ರವನ್ನು ಸ್ಥಾಪಿಸಿ, ಪ್ರಜಾಸಮುದಾಯಕ್ಕೆ ಪರಮೋಪಯೋಗವಾದ ವಸ್ತುಗಳನ್ನುಪಯೋಗಿಸಿದರೆ ಕ್ಷೇತ್ರದ ಮಹಿಮೆಯು ಮತ್ತಷ್ಟು ಹೆಚ್ಚಾಗುವುದಲ್ಲದೆ ನವೀನ ವಿಜ್ಞಾನಿಗಳ ಶೋಧನಾತಂತ್ರವೂ ಸಫಲವಾಗಿ ಪ್ರಜಾರಾಜ್ಯದ ಶಬ್ದ ಸ್ವಾರ್ಥಕವಾಗುವ ಕಾಲವು ಸಮೀಪಿಸಿದೆಯೆಂದು ಲೇಖಕನಾನ ನಾನು ಬರೆಯಲು ಸಾಹಸಪಡುತ್ತಿರುವೆನು. ಇದರಿಂದ ಆಂಧ್ರಪ್ರದೇಶಕ್ಕೆ ಪ್ರಥಮ ಕೀರ್ತಿಯು ಪ್ರಾಪ್ತವಾಗಿ ಭಾರತ ಭೂಮಿಯೆಲ್ಲವೂ ಆಂಧ್ರರಾಜ್ಯವು ಶ್ರೀಶೈಲದ ಮಲ್ಲಿಕಾರ್ಜುನನ ಹೆಮ್ಮೆಯ ಮಗನೆನ್ನಿಸಬಹುದಲ್ಲವೇ ?

## ಇದರೊಳಗಿದ್ದ ದುರ್ಗಮ ಮಾರ್ಗಗಳು

ಶ್ರೀಶೈಲ ಕ್ಷೇತ್ರವು ದುರ್ಗಮಗಳಾದ ಬೆಟ್ಟಗಳ ಮೇಲಿರುವುದರಿಂದಲೂ ಆ ಬೆಟ್ಟಗಳು ಅರಣ್ಯಪ್ರಾಂತದಲ್ಲಿರುವುದರಿಂದಲೂ, ಅಲ್ಲಲ್ಲಿ ಕ್ರೂರಮೃಗಗಳ

ಸಂಚಾರವಿರುವುದರಿಂದಲೂ, ಸ್ವಾಮಿಯ ದರ್ಶನಾಪೇಕ್ಷಿಗಳಾಗಿ ಬರುವ ಯಾತ್ರಿಕರಿಗೆ ತುಂಬಾ ಕಷ್ಟವಾಗಿದ್ದಿತು. ಶಿವರಾತ್ರಿ, ಉಗಾದಿ, ಮುಂತಾದ ಉತ್ಸವ ಸಮಯಗಳಲ್ಲಿ ಸಹಾ ಜನರು ಅಸಂಖ್ಯಾತವಾಗಿ ಹೋಗಿ ಶ್ರೀಮಲ್ಲಿಕಾರ್ಜುನ ದೇವರನ್ನು ದರ್ಶನಮಾಡಿಕೊಳ್ಳುವುದು ಕೇವಲ ಕಷ್ಟಸಾಧ್ಯವಾಗಿದ್ದಿತು.

ಶ್ರೀಸ್ವಾಮಿಯ ದರ್ಶನಕ್ಕಾಗಿ ನಾಲ್ಕು ದಿಕ್ಕುಗಳಿಂದಲೂ, ನಾಲ್ಕು ಮಾರ್ಗಗಳ ಮೂಲಕವಾಗಿಯೂ ಹೋಗುತ್ತಿದ್ದರು. ಮೂಡಲಿನಿಂದ ಬರುವವರು [ಅಂದರೆ] ರೈಲುಮಾರ್ಗವಾಗಿ ಬರುವವರು ಮಾರ್ಕಾಪುರದರೋಡ್ ಸ್ಟೇಷನ್ನಿನಲ್ಲಿ ಯಿಳಿದು ಅಲ್ಲಿಂದ ತೋರಣಾಲ ವರೆಗೂ ಹೋಗಬೇಕು. ತೋರಣಾಲಿಗೆ ಮಾರ್ಕಾಪುರ ಸ್ಟೇಷನ್ನಿನಿಂದ ೨೮ ಮೈಲು. ತೋರಣಾಲಿನಿಂದ 'ಚಿಂತಲ'ಯೆಂಬ ಗ್ರಾಮದವರೆಗೂ ೧೦ ಮೈಲು. ಅದು ಫಾರೆಸ್ಟ ರೋಡ್ [ಅರಣ್ಯವರಸ್ತೆ]ಯಿರುವದು. ಇದರ ಮೇಲೆ ಬಸ್ಸುಗಳು ಹೋಗುವುದಿಲ್ಲ. ಎತ್ತಿನ ಬಂಡಿಗಳು ಮಾತ್ರ ಹೋಗುವವು. 'ಚಿಂತಲ'ಯೆಂಬ ಗ್ರಾಮಕ್ಕೆ ೨೦ ಮೈಲು ದೂರದಲ್ಲಿ ಕ್ಷೇತ್ರವಿರುವದು. ಆ ಚಿಂತಲದಿಂದ ನಡೆದು ಹೋಗಲಿಕ್ಕೇಬೇಕು. ಚಿಂತಲ ದಾಟಿದ ಬಳಿಕ ೬ ಮೈಲಿನಲ್ಲಿ ಚಿನ್ನಾರುಟ್ಲ'ಯೆಂಬ ಗ್ರಾಮವಿರುವದು. ಅದೊಂದು ಮಜಿಲೀ, ಅಲ್ಲಿಂದ ೬ ಮೈಲಿನಲ್ಲಿ ಪೆದ್ದಾರುಟ್ಲಯೆಂಬ ಗ್ರಾಮವಿರುವದು. ಅದೊಂದು ಮಜಿಲೀ, ಅನಂತರ ಹಾಟಕೇಶ್ವರ, ಶಿಖರೇಶ್ವರಯೆಂಬ ಯರಡು ಮಜಿಲಗಳಿರುವವು. ನಂತರ ದೇವಾಲಯವು ಬರುವದು. ಇಲ್ಲಿಯವರೆಗು ನಡೆದು ಹೋಗಲಾರದವರು ಡೋಲಿಗಳನ್ನು ಯೇರ್ಪಾಟು ಮಾಡಿಕೊಳ್ಳಬಹುದು. ಸವಾರಿ ಮಾಡಬಲ್ಲವರು ಕುದುರಿಗಳ ಮೇಲೆ ಹೋಗಬಹುದಾಗಿದ್ದಿತು.

ಪಶ್ಚಿಮದಿಕ್ಕಿನಿಂದಲೂ, ದಕ್ಷಿಣದಿಕ್ಕಿನಿಂದಲೂ ಬರುವವರು ಕರ್ನೂಲಿನಿಂದಾಗಲಿ, ನಂದ್ಯಾಲದಿಂದಾಗಲಿ ಬಸ್ಸಿನೊಳಗೆ ಆತ್ಮಕೂರು ಸೇರಬಹುದಾಗಿದ್ದಿತು. ಆತ್ಮಕೂರಿನಿಂದ ನಾಗಲೂಟಿಯ ಮೇಲೆ ಪೆದ್ದಚೆರುವು ಸೇರಬೇಕು. ಆತ್ಮಕೂರಿನಿಂದ ಯಿಲ್ಲಿಗೆ ೨೬ ಮೈಲು ಪೆದ್ದಚೆರುವುವರೆಗೂ ರೋಡುಯಿರುವದು ಅಲ್ಲಿಯವರೆಗೂ ಬಂಡಿಗಳ ಮೇಲೆ ಹೋಗಬಹುದು ಪೆದ್ದಚೆರುವಿ

ನಿಂದ ಶ್ರೀಶೈಲವು ೧೦ ಮೈಲು, ಈ ಹತ್ತು ಮೈಲು ಸೂರ ನಡೆಯಬೇಕಾದುದೇ! ಅಥವಾ ಡೋಲಿಗಳನ್ನು ಯೇರ್ಪಾಟುಮಾಡಿಕೊಳ್ಳಬಹುದು.

ಉತ್ತರದಿಂದ ಅಂದರೆ ಹೈದರಾಬಾದು ಪ್ರಾಂತದಿಂದ ಬರತಕ್ಕವರು ನಾಗರ, ಕರ್ನೂಲು, ಅಮದಾಬಾದು, ತೆಲಕಪಲ್ಲಿ, ಶ್ರೀಶೈಲಕ್ಕೆ ಉತ್ತರ ದ್ವಾರದ ಉಮಾ–ಮಹೇಶ್ವರವು ವಟಗ್ಲಪಲ್ಲಿ ಯೆಂಬ ಸ್ಥಳಗಳ ಮೇಲಿಂದ ಕೃಷ್ಣಾನದಿಯನ್ನು ಸೇರಿ, ಅದನ್ನು ದಾಟಿ ಶ್ರೀಶೈಲವನ್ನು ಸೇರಬಹುದು. ಸಾಧಾರಣವಾಗಿಯೂ ಮಾರ್ಗವೆಲ್ಲವೂ ಕಾಲುದಾರಿಯೇಯೆಂದು ಹೇಳಲಡ್ಡಿಯಿಲ್ಲ.

ಯಾತ್ರಿಕರೆಲ್ಲರೂ ಸಾಧಾರಣವಾಗಿ ತೋರಣಾಲದವರೆಗೂ ಬಸ್ಸಿನ ಮೇಲೆ ಬಂದು, ಅಲ್ಲಿಂದ ಪೆದ್ದಚೆರುವುವರೆಗೂ ಬಂಡಿಗಳ ಮೇಲೆ ಹೋಗಿ ಮಿಕ್ಕ ಹತ್ತು ಮೈಲು ದೂರನಡೆದು ಹೋಗುತ್ತಿದ್ದರೂ ಮಾರ್ಗವು ಭಯಂಕರವಾದ ಮಹಾರಣ್ಯ ಮಧ್ಯದಲ್ಲಿರುವುದರಿಂದ ಕ್ರೂರಮೃಗಗಳ ಭಯವು, ಕಳ್ಳರ ಭಯುವುಯಿದ್ದಿತೆಂದು ಹೇಳಲಭ್ಯಂತರವಿರಲಿಲ್ಲ. ಆದುದರಿಂದ ಯಾತ್ರಿಕರು ಚೆಂಚ ಜನರ ಸಹಾಯವನ್ನು ಪಡೆಯಬೇಕಾಗಿದ್ದಿತು.

ಇಲ್ಲಿ ಯಾತ್ರಿಕರು ಯೆಲ್ಲ ಮಾರ್ಗಗಳಲ್ಲಿಯೂ ಚೆಂಚು ಜನರಿಗೆ ಸಲ್ಲಿಸಬೇಕಾದ ಕಟ್ಟಳೆಯ ದ್ರವ್ಯವಿರುವದು. ಒಬ್ಬೊಬ್ಬ ಯಾತ್ರಿಕನು ಯರಡಾಣೆಯಂತೆ ಅವರಿಗೆ ಕೊಡಬೇಕಾಗುವದು. ಹಾಗೆ ಕೊಡದಿದ್ದರೆ ಯಾತ್ರಿಕರು ಮುಂದೆ ಒಂದು ಹೆಜ್ಜೆಯನ್ನಾದರೂ ಮುಂದಕ್ಕಿಡಲು ಸಾಧ್ಯವಿದ್ದಿಲ್ಲವು ಇದಕ್ಕೆ ಪ್ರತಿಫಲವಾಗಿ ಅವರು ವರ್ಷವೆಲ್ಲವೂ ಆ ಪ್ರಾಂತವನ್ನೆಲ್ಲವೂ ಸಂರಕ್ಷಿಸುತ್ತಾ ಕ್ರೂರಮೃಗಗಳಿಂದಾಗಲೀ ಕಳ್ಳರಿಂದಾಗಲಿ ಯಾತ್ರಿಕರಿಗೆ ಯಾವ ವಿಧವಾದ ಉಪದ್ರವವಾಗದಂತೆ ನೋಡಿಕೊಳ್ಳುತ್ತಿರುವದು.

ಉತ್ಸವ ಕಾಲಗಳಲ್ಲಿಯೂ ಮಾರ್ಗಗಳಲ್ಲಿ ದಾಸೋಹಗಳು, ಅನ್ನದಾನ ಮಾಡುವ ಛತ್ರಗಳು ಅರವಟ್ಟಿಗೆಗಳು ಯೇರ್ಪಡಿಸುವದುಂಟು.

ನಡೆದು ಪ್ರಮಾಣಮಾಡುವದು ಅತ್ಯಂತ ಕಷ್ಟವೆಂದು ಭಾವಿಸಿದರೂ ದಾರಿಯ ಉದ್ದಕ್ಕು ಸುಂದರವಾದ ದೃಶ್ಯಗಳು ಮನಸ್ಸಿಗೆ ಯೆಷ್ಟೋ ಆನಂದವ

ನ್ನುಂಟು ಮಾಡುತ್ತಾ ಯಾತ್ರಿಕರ ಪ್ರಯಾಣಾಯಾಸವನ್ನು ಕಳೆಯುತ್ತಿರುವವು.

ಪೆದ್ದಚೆರುವಿನಿಂದ ೬ ಮೈಲು ಪ್ರಯಾಣಮಾಡಿದರೆ 'ಭೀಮನಕೊಳ'ವೆಂಬುವ ಸ್ಥಲವು ಬರುತ್ತದೆ. ಇಶ್ಚಯ ಸ್ಥಿತಿಯಲ್ಲಿದು ಕೊಳವಲ್ಲವು. ಇದು ಹತ್ತುಮೊಳ ಉದ್ದವಾಗಿಯೂ ನಾಲ್ಕಬಿಂದು ಮೊಳ ಅಗಲವಾಗಿಯೂ ಇರುವ ಒಂದು ದೊಣೆ ಈ ಮಾರ್ಗದಿಂದ ಬಂದ ಯಾತ್ರಿಕರಿಲ್ಲಿ ದಾಹವನ್ನು ಪರಿಹರಸಿಕೊಳ್ಳಲಿದು ಮುಖ್ಯವಾದ ಸ್ಥಲ. ಇದೂ ಅಗಾಧವಾದ ಆಳವಾಗಿದ್ದೆ ಈ ಕೊಳದಲ್ಲಿ ಇಳಿಯುವದೂ ಹತ್ತುವದೂ ಕಿಂಚಿತ್ ಪ್ರಮಾದಕರವಾದುದಾಗಿದೆ. ಇಲ್ಲಿಂದ ಶ್ರೀ ಶೈಲವು ಇನ್ನು ನಾಲ್ಕು ಮೈಲಿನಲ್ಲಿರುವದು. ಇಲ್ಲಿಂದ ಉತ್ತರವಾಗಿ ಪ್ರಮಾಣವನ್ನು ಸಾಗಿಸಬೇಕು. ನಂತರ ಚುಕ್ಕಪರ್ವತಮು ಅಥವಾ ನಕ್ಷತ್ರ ಪರ್ವತವು ಬರುವದು. ಇದು ವಿಶೇಷ ಎತ್ತರವಾಗಿದೆ. ಎರಡು ಮೈಲು ನೀಟಾಗಿ ಹತ್ತಬೇಕು. ನಕ್ಷತ್ರಗಳನ್ನು ತಗಲುವಂತಿದ್ದ ಪರ್ವತವಾದುದರಿಂದ ಇದಕ್ಕೆ ಈ ಹೆಸರು ಬಂದಿರಬಹುದು. ಅಥವಾ ಹತ್ತುವವರಿಗೆ ಹೆಚ್ಚು ಶ್ರಮೆಯಿಂದ ನಕ್ಷತ್ರಗಳು ಕಂಡು ಬಂದಂತಾಗುವದರಿಂದ ಈ ಹೆಸರು ಬಂದಿರಬಹುದೆಂದೂ ಊಹಿಸಬಹುದಾಗಿದೆ. ಬಾವಿಯಲ್ಲಿ ಬಿದ್ದ ವಸ್ತುಗಳನ್ನು ಮೇಲಕ್ಕೆ ಸೇದಿದಂತೆಯೇ ತಮ್ಮನ್ನು ಮೇಲಕ್ಕೆ ತೆಗೆದುಕೊಳ್ಳಬೇಕೆಂದೂ ಇಲ್ಲಿಯ ಭಕ್ತರು ಶ್ರೀ ಮಲ್ಲಿಕಾರ್ಜುನನನ್ನು ಪ್ರಾರ್ಥಿಸುತ್ತಾಹಾದಿ ನಡೆಯುವದು ಸಂಪ್ರದಾಯಕವಾಗಿ ಬಂದ ಅಭ್ಯಾಸ ಈ ಬೆಟ್ಟವನ್ನು ಹತ್ತುವ ಕಾಲಕ್ಕೆ ಪ್ರಜೆಗಳು ಅನುಭವಿಸುವ ಕಷ್ಟಗಳನ್ನು ಮಾಡುವ ಪ್ರಾರ್ಥನೆಗಳನ್ನು ಶ್ರೀ ಪಾಲ್ಕುರಿಕಿ ಸೋಮನಾಥ ಕವಿ ತನ್ನ ಪಂಡಿತಾರಾಧ್ಯಚರಿತ್ರೆಯಲ್ಲಿ ಬಹು ಚನ್ನಾಗಿ ವರ್ಣಿಸಿರುವನು.

ಚಿಕ್ಕುಚುನೋಕಾಳ್ಳ ಚೇತತುಲೂಚುನು
ವಂಗುಚುವ್ರಾಲು ಚುತ್ರೊಂಗುಚು ಜನುಚು
ಚೇದುಕೋ ಮಲ್ಲಯ್ಯ ಚೇದುಕೊಮ್ಮನು ಚು
ಗನುಕನಿಪಾಟಲ ಗಟ್ಟಿಪಾಟುಚೂನು
ಭಕ್ತುಲು ನಕ್ಷತ್ರವಪರ್ವತಮು ನೆಕ್ಕುದುರಟ

ಈ ನಕ್ಷತ್ರ ಪರ್ವತವನ್ನು ಹತ್ತುವಾಗ ಯಾತ್ರಿಕರು ಅತ್ಯಂತ ಎಚ್ಚರಿಕೆಯಿಂದಿರಬೇಕು. ಬೀಳದಂತೆಯೂ, ಜಾರದಂತೆಯೂ, ತಗ್ಗುದಿನ್ನೆಗಳ ಸೋಪಾನಗಳ ಮೇಲೆ ಭದ್ರವಾಗಿ ಪಾದಗಳನ್ನಿರಿಸಿ, ಕಷ್ಟದಿಂದ ಪರ್ವತವನ್ನು ಹತ್ತಬೇಕು. ಮತ್ತು ಅಲ್ಲಿಂದ ಒಂದ ಮೈಲು ದೂರ ಕೆಳಭಾಗಕ್ಕೆ ಯಿಳಿಯುಬೇಕಾಗುವದು. ಹಾಗೆ ಯಿಳಿದರೆ ತ್ರಿಪುರಾಂತಕದಿಂದ ಬರುವ ಮಾರ್ಗವು ಈ ಮಾರ್ಗಕ್ಕೆ ಸೇರುವದು. ಕೆಲವು ದೂರ ಹೋದನಂತರ ಸಮತಲ ಪ್ರದೇಶವು ಸೇರಬಹುದು. ಆ ಸ್ಥಲದಿಂದ ಶ್ರೀಶೈಲದ ಕೋಟೆಯು ಕಂಡುಬರುವದು. ಇಲ್ಲಿಂದ ನೋಡಿದರೆ ಉತ್ತರದಲ್ಲಿ ಬ್ರಹ್ಮಗಿರಿ, ವಿಷ್ಣುಗಿರಿಗಳು, ಪೂರ್ವದಿಕ್ಕಿನಲ್ಲಿ ಶಿಖರೇ–ಶ್ವರ, ಹಾಟಕೇಶ್ವರಗಳು ದಕ್ಷಿಣದಲ್ಲಿ ಭೀಮನಕೊಳ, ಅಗಳ್ತಿಯ ಆಗಾಧವಾದ ಕೆಳಭಾಗದಲ್ಲಿ ಪ್ರವಹಿಸುತ್ತಿದ್ದ ಕೃಷ್ಣಾಪ್ರವಂತಿಯಲ್ಲಿ ಕಲೆಯುವ ಸರೋವರವು ಅತ್ಯಂತ ರಮಣೀಯವಾಗಿ ಕಂಡುಬರುತ್ತಾ ಆನಂದವನ್ನು ಹುಟ್ಟಿಸುತ್ತಿರುವದು. ಈ ದೃಶ್ಯವನ್ನು ನೋಡಿದಮಾತ್ರದಿಂದಲೇ ಯಿಲ್ಲಿಯವರೆಗೂ ಯಾತ್ರಿಕರನುಭವಿಸಿದ ಮಹತ್ತರವಾದ ಆಯಾಸವೆಲ್ಲವೂ ವಿಸ್ಮೃತಿಯಾಗುವದು.

೧೯೫೭ನೇ ಸಂ॥ ನವಂಬರ್ ತಿಂಗಳಲ್ಲಿ ತೋರಣಾಲದಿಂದ ಶ್ರೀಶೈಲಕ್ಕೆ ಹಾಕಲ್ಪಟ್ಟ ರೋಡು ಪ್ರಾರಂಭವಾಗುವವರೆಗೂ ಯಾತ್ರಿಕರು ಮೇಲ್ಭಾಗದಲ್ಲಿ ಹೇಳಿದಂತೆ ಅತೀವ ಕಷ್ಟಪಡಬೇಕಾದ್ದಿತು. ಆ ದಿವಸ ಆದಿತ್ಯವಾರ, ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ನೀಲಂ ಸಂಜೀವರೆಡ್ಡಿಯವರು ಈ ಮಾರ್ಗವನ್ನು ಪ್ರಯಾಣಿಕರ ಸೌಕರ್ಯಾರ್ಥವಾಗಿ ಪ್ರಾರಂಭಿಸಿದರು. ಬಸ್ಸುಗಳು ಸಹಾ ಸಕ್ರಮವಾಗಿ ಈ ಮಾರ್ಗದಲ್ಲಿ ಸಂಚರಿಸುವಂತೆ ಸುಖಪ್ರಯಾಣದ ಸೌಕರ್ಯವನ್ನು ಯೇರ್ಪಡಿಸಿರುವರು.

## ನೂತನಮಾರ್ಗ

— —— —

ತಿರುಪತಿಯಿಂದ ತಿರುಮಲೆವರೆಗೂ ರೋಡಿನ ಸೌಕರ್ಯವು ಹೇಗೆ ನಿರ್ಮಿತವಾಗಿದೆಯೋ ತದ್ವತ್ ತೋರಣಾಲದಿಂದ ಶ್ರೀಶೈಲಕ್ಕೆ ರೋಡನ್ನು ನಿರ್ಮಿಸಿ ಯಾತ್ರಿಕರಿಗೆ ಮಹೋಪಕಾರ ಮಾಡಬೇಕೆಂದು ಸಂಕಲ್ಪವು ಕೆಲವು

ವರ್ಷಗಳ ಹಿಂದೆಯೇ ಆಂಧ್ರ ಪ್ರಧಾನಾಮಾತ್ಯರಾದ ಶ್ರೀನೀಲಂಸಂಜೀವರೆಡ್ಡಿ ಯವರಿಗೆ ತಲೆದೋರಿತು. ತಮ್ಮ ಮಾನಸದಲ್ಲಿ ಹುಟ್ಟಿದ್ದ ಸಂಕಲ್ಪವನ್ನು ಛಿದ್ರಗೊಳಿಸದಂತೆ ಕೇಂದ್ರ ಪ್ರಭುತ್ವದೊಡನೆ ಚರ್ಚಿಸಿ ಅವರ ಸೌಜನ್ಯದಿಂದ ಶ್ರೀಶೈಲದ ಮಹಾದ್ವಾರದವರೆಗೂ ಸಾಧಾರಣ ಮೂವತ್ತೆರಡು ಮೈಲುಮಾರ್ಗ ವನ್ನು ನಿರ್ಮಿಸಲು ಸಾಹಸಪಟ್ಟರು. ಇದಕ್ಕಾಗಿ ಕೊಂಚ ಹೆಚ್ಚು ಕಡಿಮೆ ಇಪ್ಪತ್ತು ಲಕ್ಷ ರೂಪಾಯಿಗಳು ಖರ್ಚಾದವಂತೆ.

ಸಾಧಾರಣವಾಗಿ ರೋಡನ್ನು ನಿರ್ಮಿಸುವದೇ ಯೆಷ್ಟೋ ಶ್ರಮಸಾಧ್ಯ ವಾದ ಕೆಲಸ ಹೀಗಿರುವಲ್ಲಿ ಬೆಟ್ಟಗಳ ಮೇಲೆ ಯಾವ ವಿಧವಾದ ಪ್ರಮಾದ ಗಳೂ ಸಂಭವಿಸದಂತೆ ನಿಯಮಿತ ಕಾಲದಲ್ಲಿ ಮಾರ್ಗವನ್ನು ನಿರ್ಮಿಸಿದ ಯಿಂಜನಿಯರ್‌ರವರ ಪ್ರತಿಭಾಶಕ್ತಿಯು ಪ್ರಶಂಸನೀಯವೆಂದೂ ಹೇಳಲು ಅತಿಶ ಯೋಕ್ತಿಯಾಗುವದಿಲ್ಲ. ತಾವೀಕಾರ್ಯವನ್ನು ನಿರ್ವಹಿಸುವದರಲ್ಲಿ ದೈವ ಬಲವೇ ಶ್ರೀ ಮಲ್ಲಿಕಾರ್ಜುನನ ಬೆಂಬಲವೇ ಹೆಚ್ಚಾಗಿದ್ದಿತೆಂದು ಯಿಂಜನೀಯ ರರೇ ವಿಶ್ವಾಸದಿಂದ ಹೇಳುತ್ತಿರುವರು.

ಕಾರ್ಯವು ಪ್ರಾರಂಭಿಸುವುದಕ್ಕೆ ಮುಂಚೆ ಅವರು ತಮ್ಮ ಸ್ವತಂತ್ರ ದ್ರವ್ಯದಿಂದ ವಿಘ್ನೇಶ್ವರನಿಗೊಂದು ಚಿಕ್ಕ ಆಲಯವನ್ನು ನಿರ್ಮಿಸಿ ತಮ್ಮ ಪ್ರಯ ತ್ನವನ್ನು ನಿರ್ವಿಘ್ನವಾಗಿ ಕೊನೆಗಾಣಿಸಬೇಕೆಂದು ಆ ಗಣೇಶನಿಗೆ ನಮಸ್ಕರಿಸಿ ಕೊಂಡರಂತೆ ಹಾಗೆ ಮಾಡಿದುದರಿಂದಲೇ ತಮ್ಮ ಕಾರ್ಯಕ್ರಮಕ್ಕೆ ಯಾವ ವಿಧವಾದ ವಿಘ್ನಗಳಾಗಲಿ, ಯಾವ ವಿಧವಾದ ಪ್ರಮಾದಗಳಾಗಲಿ ಉಂಟಾಗ ಲಿಲ್ಲವೆಂದು ಅವರು ಹೇಳುತ್ತಿರುವರು, ಅಷ್ಟಾವಕ್ರವಾಗಿದ್ದ ಮಾರ್ಗ ವನ್ನು ಸರಿಪಡಿಸಿ ಸಕ್ರಮ, ಸಂಶೋಧನಾ ಮಾರ್ಗವನ್ನು ನಿರ್ಮಿಸಿದ ಬಳಿಕ ನೋಡಿ ಆ ಯಿಂಜನೀಯರರೇ ಆಶ್ಚರ್ಯದಿಂದ ಚಕಿತರಾದರಂತೆ.

ಈ ಮಾರ್ಗವನ್ನು ನಿರ್ಮಿಸುವಾಗ ಪ್ರಕೃತಿ ಶೋಭೆಯು ಕಳೆಗುಂದದಂತೆ ಮಹತ್ತರ ಸೌಂದರ್ಯಕರವಾದ ದೃಶ್ಯಗಳು ಹಾದಿಯುದ್ದಕ್ಕೂ ಕಂಡುಬರು ವಂತೆ ಕಲಾಶಾಸ್ತ್ರ ಧುರೀಣರಾದ ವಾಸ್ತುಶಾಸ್ತ್ರಜ್ಞರು ತಕ್ಕ ಶ್ರದ್ಧೆಯನ್ನು ವಹಿಸಿದರು. ಹಾಗೆ ದೂರದೃಷ್ಟಿಯಿಂದ ನಿರ್ಮಿಸಿದುದರಿಂದ ಪಾತಾಳಗಂಗೆಯ ಶ್ರೀಗಿರಿಮಲ್ಲಿಕಾರ್ಜುನನ ದೇವಾಲಯದ ಶೋಭೆಯು ಅಚ್ಚಳಿಯದಂತೆ

ನೋಡಲು ರಮಣೀಯಕವಾಗಿ ಶ್ರೀಪರ್ವತದ ಮನೋಹರ ದೃಶ್ಯಗಳೆಲ್ಲವೂ ಹಾದಿಯುದ್ದಕ್ಕೂ ನೋಡಲು ಮನಸ್ಸನ್ನಾಕರ್ಷಿಸುವಂತಾಗಿದೆ.

ಯುವಕರಾದ ಇಂಜಿನೀಯರರು ನಿರ್ಮಲ ಹೃದಯದಿಂದಲೂ ತ್ರಿಕರಣ ಶುದ್ಧಿಯಿಂದಲೂ, ಸತ್ಯಸಂಕಲ್ಪದಿಂದಲೂ ಹೊಂದಿಕೆಯಾಗಿ ತಮ್ಮ ಧರ್ಮವನ್ನು ನೆರವೇರಿಸುವದರಿಂದ ರೋಡಿನ ನಿರ್ಮಾಣಕ್ಕೆ ಪ್ರತ್ಯೇಕಿಸಲ್ಪಟ್ಟ ಹಣದಲ್ಲಿ ಎರಡು ಲಕ್ಷ ರೂಪಾಯಿಗಳನ್ನು ಉಳಿಸಿರುವರು.

ಅವರು ತಮ್ಮ ನಿವಾಸ ಗೃಹಗಳಿಗಾಗಿ ಕೊಟ್ಟ ಹಣದಲ್ಲಿ ಅರ್ಧಾಂಶವನ್ನು ಉಳಿಸಿ, ಆಧುನಿಕ ಸೌಕರ್ಯವಿಲ್ಲದ ಗೃಹಗಳಲ್ಲಿ ನಿವಾಸಮಾಡುತ್ತಾ ಅನಾರೋಗ್ಯಕರಂಗಳಾದ ಸ್ಥಳಗಳಲ್ಲೇ ನಿವಾಸಮಾಡುತ್ತಾ ಎರಡು ವರ್ಷದೊಳಗಾಗಿಯೇ ಈ ಕೆಲಸವನ್ನು ಮುಗಿಸಿ ಧನ್ಯಜೀವಿಗಳೆನ್ನಿಸಿಕೊಂಡರು. ಎರಡು ಲಕ್ಷ ಹಣವನ್ನು ಉಳಿಸಿ ಪಾಠಶಾಳೆಗಂಗೆಗೆ ರೋಡು ಹಾಕುವದಕ್ಕೆ ಸೌಕರ್ಯಗಳನ್ನು ವಿಶದಗೊಳಿಸಿ ಆ ಸದವಕಾಶವನ್ನು ಪ್ರಜಾಪ್ರಭುತ್ವಕ್ಕೆ ಸೂಚಿಸಿದರಂತೆ,

ತೋರಣಾಲದಲ್ಲಿ ಶ್ರೀಶೈಲದ ರೋಡು ಪ್ರಾರಂಭವಾದ ಸ್ಥಳದಲ್ಲಿ ನೂತನವಾಗಿ ನಿರ್ಮಿಸಿದ ವೃಷಭಧ್ವಜವಿರುವದು. ನಗರಗಳ ಪ್ರಣಾಳಿಕೆಗಳನ್ನು ಸಿದ್ಧಗೊಳಿಸುವ ಶಾಖೆಯ ಸಹಾಯ ಡೈರೆಕ್ಟರರು ಶ್ರೀರಮಣಾರೆಡ್ಡಿಯವರು ಈ ಡಿಜೈನನ್ನು ತಯಾರಮಾಡಿದರಂತೆ ? ಈ ವೃಷಭಧ್ವಜವು ದೇವಾಲಯದ ಶೋಭೆಗೆ ತಕ್ಕಂತೆ ಹೆಚ್ಚಾದ ಆಕರ್ಷಣೀಯವಾದುದಾಗಿರುವದು. ಇದಿರಾಗಿ ವೃಷಭವು ಶಿಲ್ಪಕಲೆಯ ಮೂರ್ತೀಭವಿಸಿದ ಸೌಂದರ್ಯ ಕಲಿತವಾಗಿರುವದು. ಅದರ ಹಿಂದೆ ಕಂಭವು. ಅದಕ್ಕೆ ಎರಡು ಪಕ್ಕಗಳಲ್ಲಿ ಚಂದ್ರಕಾಂತ ಶಿಲೆಯ ಪದ್ಮಗಳಿರುವವು. ಅದರ ಮೇಲೆ ರೋಡಿಗೆ ಪ್ರಾರಂಭೋತ್ಸವ ಮಾಡಿದ ಮುಖ್ಯಮಂತ್ರಿಗಳಾದ ಶ್ರೀ ನೀಲಂಸಂಜೀವರಡ್ಡಿಯವರ ರಹದಾರಿ ಶಾಖಾ ಮಂತ್ರಿ ಶ್ರೀ ಮಂದಮುಲ ನರಸಿಂಗರಾಯರ ಮತ್ತು ಇಂಜನೀಯರರ ನಾಮಧೇಯಗಳೂ ಲಿಖಿಸಲ್ಪಟ್ಟಿರುವವು.

ಈ ಮಾರ್ಗ ನಿರ್ಮಾಣವು ಯಾತ್ರಿಕರಿಗೆ ಸೌಕರ್ಯವನ್ನುಂಟುಮಾಡಿರುವದಲ್ಲದೆ ಕೆಲವು ಜನ ಜೀವನದಲ್ಲಿ ದೊಡ್ಡ ಬದಲಾವಣೆಯನ್ನುಂಟುಮಾಡಿ

ಅವರ ಅಭ್ಯುನ್ನತಿಗೆಷ್ಟೋ ಸಹಾಯಕಾರಿಯಾಯಿತು. ಸಾಮಾನ್ಯವಾಗಿ ವೈಗಳ್ಳರಾಗಿ, ವೃಥಾಕಾಲಹರಣ ಮಾಡುತ್ತಲಿದ್ದ ಚೆಂಚುಕುಲದವರಿಗೆ ಈ ಕಾರ್ಯದಿಂದ ಅವರಿಗೆ ತಕ್ಕಷ್ಟು ಕೆಲಸಮಾಡಲನುಕೂಲವಾಯಿತು. ರಹದಾರಿಶಾಖೆಯ ಉದ್ಯೋಗಿಗಳು ಅವರನ್ನು ಪ್ರೋತ್ಸಾಹಗೊಳಿಸಿ ಕಲ್ಲು ಒಡೆಯುವದು ಮುಂತಾದ ಕೆಲಸಗಳನ್ನು ಅಭ್ಯಾಸಮಾಡುವಂತೆ ಮಾಡಿದರು. ಇದರಿಂದ ಕಷ್ಟಪಟ್ಟು ಕೆಲಸಮಾಡಿ ಜೀವಿಸುವ ಪದ್ಧತಿಗೆ ಅವರು ಪಳಗಿದರು. ಕ್ರಮಕ್ರಮವಾಗಿ ಅಭ್ಯುದಯ ಮಾರ್ಗಗಳಿಗೆ ಆಸಕ್ತರಾಗಿರುವರು. ಶ್ರೀಶೈಲ ಪರ್ವತಪ್ರದೇಶದಲ್ಲಿ ಬಿದಿರು, ಜೇನು ಮುಂತಾದ ವಸ್ತುಗಳು ವಿಶೇಷವಾಗಿ ಲಭಿಸುತ್ತವೆ. ಆದರೆ ಇಲ್ಲಿಯವರೆಗೂ ರೋಡುಗಳಿಲ್ಲದಿದ್ದುದರಿಂದ ಆ ಪದಾರ್ಥಗಳನ್ನು ವ್ಯಾಪಾರ ದೃಷ್ಟಿಯಿಂದ ರವಾನಿಸುವದಕ್ಕೆ ಅವಕಾಶವಿಲ್ಲದಂತಾಗಿದ್ದಿತು. ಈ ನೂತನ ಮಾರ್ಗದ ಮೂಲಕವಾಗಿ ಪದಾರ್ಥಗಳನ್ನು ಬೇರೊಂದು ಸ್ಥಳಗಳಿಗೆ ರವಾನಿಸುವದಕ್ಕೆ ಸುಲಭವಾಯಿತು. ಮತ್ತು ಹೀಗೆ ರಾಜಮಾರ್ಗವು ಏರ್ಪಾಟಾದುದರಿಂದ ನಿರ್ಮಾನುಷ್ಯವಾದ ಪ್ರದೇಶಗಳು ನಿವಾಸ ಯೋಗ್ಯಗಳಾಗಿ ಜನ ಸಂಚಾರದಿಂದ ನೂತನವಾದ ಕಳೆಯು ಪ್ರಾದುರ್ಭವಿಸುತ್ತದೆ

ತೋರಣಾಲದಿಂದ ಶ್ರೀಶೈಲಕ್ಕೆ ರೋಡನ್ನು ನಿರ್ಮಿಸಿದಂತೆಯೇ ಕೃಷ್ಣಾ ನದಿಯ ಆಚೆಯ ಭಾಗದಲ್ಲಿರುವ ಹೈದರಾಬಾದದಿಂದ ಸಹಾ ೪೦ ಮೈಲು ಮಾರ್ಗವನ್ನು ನಿರ್ಮಿಸುವದಕ್ಕೆ ಪ್ರಭುತ್ವವು ನಿಶ್ಚಯಿಸಿರುವದು. ಆ ಪ್ರಾಂತದಲ್ಲಿ ಮನ್ನನೂರಿನಿಂದ ನೀಲಗಂಗೆಯುವರೆಗೂ ರೋಡು ನಿರ್ಮಾಣವಾಗುತ್ತದೆ. ಇದಕ್ಕೆ ೧೭ ಲಕ್ಷದ ಹಣವು ಖರ್ಚಾಗುವದಂತೆ. ಆ ರೋಡು ತೆಲಂಗಾಣದಲ್ಲಿ ಪೊಲಮೂರುಮಂಡಲದಲ್ಲಿರುವ ಅಮ್ರಾಬಾದ್ ಬೆಟ್ಟಗಳ ಮಧ್ಯದಿಂದ ಫರಾನ್‌ಬಾದ್ ಮಾರ್ಗವಾಗಿ ನೀಲಗಂಗೆಗೆ ಸೇರುವುದಂತೆ, ಈ ರೋಡು ನಿರ್ಮಾಣವಾದರೆ ಉತ್ತರಪ್ರಾಂತದಿಂದ ಬರುವವರು ಸುತ್ತುಸುತ್ತಿ ಬರುವ ಕಷ್ಟವೆಲ್ಲವೂ ನೀಗುವದು. ಸುಖವಾದ ಮಾರ್ಗವಾಗುವದು.

ಸದ್ಯಃ ತೋರಣಾಲ ಶ್ರೀಶೈಲದ ರಾಜಮಾರ್ಗವು ಏರ್ಪಾಟಾದುದರಿಂದ ಬಸ್ಸುಗಳು ಪ್ರತಿನಿತ್ಯವೂ ಹೋಗಿಬರುತ್ತಿರುವವು. ತೋರಣಾಲದಿಂದ

ಶ್ರೀಶೈಲಕ್ಕೆ ಟಿಕೀಟು ಎರಡು ರೂಪಾಯಿಗಳು ಮಾತ್ರವೇ; ಮಾರ್ಕಾಪುರದಿಂದ ಬರುವವರು ಕೆಳಗೆ ಕಾಣಿಸಿದ ವೇಳಾಪಟ್ಟಿಯನ್ನು ಗಮನಿಸಿ ಪ್ರಯಾಣ ಮಾಡಬಹುದಾಗಿದೆ.

### ಬಸ್ಸುಗಳ ವೇಳಾಪಟ್ಟಿ

| | | ಗಂಟೆ ನಿಮಿಷ |
|---|---|---|
| ೧ | ಮಾರ್ಕಾಪುರಂ ರೋಡಿನಿಂದ ಹೊರಡುವ ವೇಳೆ | ೫ – ೦ |
| ೨ | ಮಾರ್ಕಾಪುರಕ್ಕೆ ಸೇರುವ ವೇಳೆ | ೫—೧೫ |
| ೩ | ಮಾರ್ಕಾಪುರದಿಂದ ಹೊರಡುವ ವೇಳೆ | ೫– ೩೦ |
| ೪ | ತೋಕಪಲ್ಲೀಸೇರುವ ವೇಳೆ | ೬—೩೦ |
| ೫ | ತೋಕಪಲ್ಲಿಬಿಡುವ ವೇಳೆ | ೬—೪೦ |
| ೬ | ತೋರಣಾಲ ಬಿಡುವ ವೇಳೆ | ೭—೦ |
| ೭ | ತೋರಣಾಲ ಸೇರುವ ವೇಳೆ | ೭—೧೫ |
| ೮ | ಶ್ರೀಶೈಲ ಸೇರುವ ವೇಳೆ | ೯—೪೫ |

ಕರ್ನೂಲ ಭಾಗದಿಂದ ಬರುವವರೂ ಸಹಾ ತೋರಣಾಲವರೆಗೂ ಬಂದು ಅಲ್ಲಿಂದ ಶ್ರೀಶೈಲಕ್ಕೆ ಹೋಗಬಹುದು.

‡*****‡

## — ಪ್ರಧಾನ ದೇವಾಲಯಗಳು —

ಶ್ರೀಶೈಲಮಹಾ ಕ್ಷೇತ್ರವೆನ್ನುವದುಸಮಸ್ತರಿಗೂ ವೇದ್ಯವಾದ ವಿಷಯವು ಅಲ್ಲಿ ಹಲವು ದೇವಾಲಯಗಳಿರುವವೆಂಬುದು ಆಶ್ಚರ್ಯವೇನಲ್ಲ. ಆದರೆ ಅವುಗಳಲ್ಲಿ ಶ್ರೀ ಮಲ್ಲಿಕಾರ್ಜುನ ದೇವಾಲಯವು. ಶ್ರೀಭ್ರಮರಾಂಬಿಕಾ ದೇವಾಲಯವು ಅತ್ಯಂತ ಮುಖ್ಯವಾದುದೆಂದು ಬೇರೆ ಹೇಳಬೇಕಾಗಲ್ಲವು.

ಪರ್ವತದ ಮೇಲಣ ಸಮಪ್ರದೇಶಕ್ಕೆ ಬಂದ ಕೂಡಲೇ ಕೋಟೆಯ ಮಹಾದ್ವಾರಗಳೂ, ಗೋಡೆಗಳೂ ಕಂಡುಬರುವವು. ಗೋಡೆಗಳು ತುಂಬಾ ಗಾತ್ರವಾಗಿಯೂ, ೨೦ ರಿಂದ ೨೬ ಅಡಿಗಳ ಎತ್ತರವಾಗಿಯೂ ಇರುವವು.

ಅವು ಸರಾಸರಿ ಏಳಡಿ ಉದ್ದವಾಗಿರುವವು ಮೂರಡಿಗಳ ಎತ್ತರವಾಗಿ ನಾಲ್ಕುಮೂಲೆ ಚೌಕವಾಗಿರುವ ಕರಿಯಕಲ್ಲುಗಳಿಂದ ನಿರ್ಮಿಸಲ್ಪಟ್ಟಿವೆ. ಗೋಡೆಗಳ ಮೇಲೆ ಹಲವಾರು ವಿಗ್ರಹಗಳು ಕೆತ್ತಲ್ಪಟ್ಟಿರುವವು ಅವು ಶಿಲ್ಪ ಕಲಾ ವೈಶಿಷ್ಟ್ಯವನ್ನು ವ್ಯಕ್ತಗೊಳಿಸುತ್ತಲಿವೆ. ಅವಕ್ಕೆ ಎಂಟು ಮೂಲೆಗಳಲ್ಲಿಯೂ ಅಷ್ಟಭೈರವ ಮೂರ್ತಿಗಳು ಪ್ರತಿಷ್ಠಿಸಲ್ಪಟ್ಟಿರುವವು. ಈ ಸ್ಥಿತಿಯನ್ನು ನೋಡಲಾಗಿ ಪೂರ್ವದಲ್ಲಿ ಈ ಭಾಗವೆಲ್ಲವೂ ವೀರಶೈವರ ಪ್ರಾಬಲ್ಯ ಹೆಚ್ಚಾಗಿದ್ದಂತೆ ಊಹಿಸಲವಕಾಶವಿವೆ, ಇದಲ್ಲದೆ ಇಲ್ಲಿ ಭೈರವಾಗಮ ವಿಧಾನಕ್ಕನುಸರಿಸಿ ಅರ್ಚನಾದಿಗಳು ನಡಿಯಿಸಲ್ಪಡುತ್ತಿದ್ದಂತೆ ಕಾಣುತ್ತದೆ.

ಇದಕ್ಕೆ ಪಶ್ಚಿಮಭಾಗದಲ್ಲಿ ಅನತಿ ದೂರದಲ್ಲಿ ಪಂಚ ಮಠಗಳಿರುವವು ಕೊಂಚ ದೂರಹೋಗುವದರೊಳಗಾಗಿ ಆಲಯ ಪ್ರಾಕಾರವು ಕಂಡುಬರುತ್ತದೆ. ಇದು ನಾಲ್ಕು ಪಕ್ಕೆಗಳಲ್ಲಿಯೂ ಇಪ್ಪತೆರಡು ಅಡಿಗಳ ಎತ್ತರವುಳ್ಳದ್ದಾಗಿರುವದು ಅದು ಮೂಡಲು, ಪಡವಲುಗಳಿಗೆ ೫೧೦ ಅಡಿಗಳೂ, ಬಡಗಲು, ಟೆಂಕಲುಗಳಿಗೆ ೬೦೦ ಅಡಿಗಳ ವೈಶಾಲ್ಯವುಳ್ಳದ್ದಾಗಿರುವದು. ಉತ್ತರ ದಕ್ಷಿಣ ದಿಕ್ಕುಗಳಲ್ಲಿಯೂ, ಮೂಡಲು ಭಾಗದಲ್ಲಿಯೂ ಗೋಪುರಗಳಿರುವವು. ಪಡುವಲು ಭಾಗದಲ್ಲಿ ಮಾತ್ರ ಗೋಪುರವೆಲ್ಲವು ಗೋಡೆಗಳೂ ಅನಂತಾನಂತ ಶಿಲ್ಪ ಚಮತ್ಕಾರಗಳಿಂದ ನೇತ್ರಾನಂದಕರವಾಗಿರುವವು.

ದೇವಾಲಯಗಳಿಗೆ ಒಂದರೊಳಗೊಂದಾವರಣಗಳು ಕಂಡುಬರುವವು. ಮೊದಲನೇ ಆವರಣದಲ್ಲಿ ಎಡಗಡೆ ಯಾತ್ರಿಕರಿಗೆ ಬಿಡದಿಗಳ, ಕೂಡ್ಲಿಗಿಯವರ ಆಸ್ಥಾನವು, ಎತ್ತರವಾಗಿ ಭ್ರಮರಾಂಬಾ ದೇವಸ್ಥಾನವು ಕಂಡುಬರುವವು ಬಲಗಡೆ ಶಿಲಾಮಂಟಪವು ಅದಕ್ಕೆ ಹೊಂದಿಕೊಂಡು ದೇವಸ್ಥಾನದವರ ಕಾರ್ಯಾಲಯಗಳೂ ಇರುವವು.

ಈ ಮೊದಲನೇ ಅವರಣದಲ್ಲೇ ಉತ್ತರದಿಕ್ಕಿನಲ್ಲಿ ವೀರಶೈವರ ಛತ್ರವಿರುವದು, ಪೂರ್ವಕಾಲದಲ್ಲಿಯೂ ಛತ್ರದ ಮುಂಭಾಗದಲ್ಲಿ ಒಂದು ಕೊಳವಿದ್ದಿತಂತೆ. ಈಗ ಅದು ಮುಚ್ಚಲ್ಪಟ್ಟಿರುವದು. ಆ ಕೊಳದಲ್ಲಿ ಅಂತರ್ವಾಹಿನಿಯಿರುವುದೆಂತಲೂ ಕೊಳವನ್ನು ಮುಚ್ಚಿಹಾಕಿದುದರಿಂದ ಅವಕ್ಕವರೋಧವು

ಸಂಭವಿಸಿತೆಂತಲೂ, ಆದುದರಿಂದ ಗೋಡೆಗಳು ಉರುಳಿಬೀಳುತ್ತಲಿರುವ ವೆಂತಲೂ, ಪರಿಶೋಧನೆ ಮಾಡಿದ ಇಂಜಿನೀಯರರು ಹೇಳುತ್ತಿರುವರು.

ಪ್ರಾಕಾರಕ್ಕೆ ಹೊರಭಾಗದಲ್ಲಿ ಆನೆಗಳ ಕೊಳ್ಳ ಮುಂತಾದವುಗಳು ಮೂರು ಕೊಳಗಳಿರುವವು ಯಾತ್ರಾದಿ ದಿನಗಳಲ್ಲಿ ಪೈಪುಗಳ ನಳಗಳ ಮೂಲಕವಾಗಿ ಇವುಗಳಿಂದ ಒಳ್ಳೇಯ ನೀರು ಒದಗಿಸುತ್ತಿರುವರು.

ಶ್ರೀ ಭ್ರಮರಾಂಬಿಕೆಯ ದೇವಾಲಯವು ತುಂಬಾ ಚಿಕ್ಕದು. ಅದರ ಮಂಟಪವು, ಆವರಣವು ಸಹಾ ಚಿಕ್ಕದಾಗಿಯೇ ಇರುವದು. ದೇವಾಲಯವು ಮೂಡಲಮುಖವಾಗಿರುವದು. ಆಲಯದ ಸ್ತಂಭಗಳ ಮೂಲಭಾಗಗಳಲ್ಲಿ ನಾಟ್ಯಗಾತಿಯರ ಚಿತ್ರಗಳೂ, ವೀರಭಟರ ಚಿತ್ರಗಳೂ ಕೆತ್ತಲ್ಪಟ್ಟಿರುವವು. ದುರ್ಗಾದೇವಿಯವರ ಚಿತ್ರಗಳು ವಿಶೇಷವಾಗಿರುವವು. ಇದು ತುಂಬಾ ಪ್ರಾಚೀನವಾದ ದೇವಾಲಯವಾಗಿರುವದು. ಇದನ್ನು ನಿರ್ಮಿಸಿದ ನಂತರವೇ ದೇವಾಲಯ ಪ್ರಾಕಾರಗಳು ನಿರ್ಮಿಸಿದಂತೆ ತೋರುತ್ತದೆ. ಇಲ್ಲಿ ಬ್ರಾಹ್ಮಣರೇ ಆರ್ಚಕರಾಗಿರುವರು.

ಅಂತರಾವರಣದಲ್ಲಿ ಅಂದರೆ ಎರಡನೆಯ ಆವರಣದ ಮಧ್ಯಭಾಗದಲ್ಲಿ ಶ್ರೀ ಮಲ್ಲಿಕಾರ್ಜುನಸ್ವಾಮಿಯ ದೇವಾಲಯವಿರುವದು. ಪ್ರಾಕಾರದ ಒಳ ಭಾಗದಲ್ಲಿ ಸುತ್ತಲೂ ಕೆಲವು ಮಂಟಪಗಳೂ ಪೂಜಾರಿಗಳ ಮನೆಗಳೂ ಇರುವವು. ಮಲ್ಲಿಕಾರ್ಜುನನನ್ನು ಪೂಜಿಸುವವರು ಮಾಹೇಶ್ವರರು (ಜಂಗಮರು)

ಶ್ರೀ ಮಲ್ಲಿಕಾರ್ಜುನ ದೇವಾಲಯವು ಸಹಾ ಚಿಕ್ಕದಾಗಿಯೇ ಇರುವದು ಅದು ಕಲ್ಲಿನಿಂದ ನಿರ್ಮಿಸಲ್ಪಟ್ಟಿರುವದು. ಗರ್ಭಾಲಯವು ಹತ್ತು ಚದುರಡಿಗಳ ವೈಶಾಲ್ಯದಲ್ಲಿರುವದು ಆ ಮಧ್ಯದಲ್ಲಿ ಶ್ರೀ ಮಲ್ಲಿಕಾರ್ಜುನಲಿಂಗವಿರುವದು.

ಆಲಯಕ್ಕೆ ಮುಂದೆ ಮೂರು ಭಾಗಗಳಲ್ಲಿ ವರಾಂಡಗಳಿರುವ ಮುಖ ಮಂಟಪವಿರುವದು. ಇದನ್ನು ವಿಜಯನಗರದ ಪ್ರಭುವಾಗಿದ್ದ ಹರಿಹರ ರಾಯರು ಕಟ್ಟಿಸಿರುವರು. ಈ ಮಂಟಪದಲ್ಲಿ ಕೆಲವು ದೊಡ್ಡ ಕಲ್ಲುಗಳಿಂದಾ ವೃತವಾದ ಗವಿ [ಗುಹೆಗಳು] ಗಳಿರುವವು. ಮಂಟಪದ ಗೋಡೆಗಳ ಮೇಲೆ ಕಂಬಿಗಳ ಮೇಲೆ ಉತ್ತಮ ಶಿಲ್ಪಗಳಿರುವವು. ಮತ್ತು ಪ್ರಧಾನ ದೇವಾಲಯಕ್ಕೆ

ಇದಿರಾಗಿಯೂ, ಮೂಡಲದಿಕ್ಕಿನಲ್ಲಿಯೂ ಎರಡು ಮಂಟಪಗಳಿರುವವು. ಅದರಲ್ಲೊಂದು ವೀರಮಂಟಪವು. ಪೂರ್ವದಲ್ಲಿ ಇಲ್ಲಿ ಕೆಲವರು ಭಕ್ತರು ತಮ್ಮ ಸಂಕಲ್ಪಗಳು ಸಿದ್ಧಿಸುವುದಕ್ಕೆ ನಾಲಿಗೆಗಳನ್ನು ಕೊಯ್ದುಕೊಳ್ಳುವ ಸಾಹಸಕೃತ್ಯಗಳು ನಡೆಯುತ್ತಿದ್ದವಂತೆ. ಒಂದು ಮಂಟಪದಲ್ಲಿ ದೊಡ್ಡದಾದ ನಂದಿವಿಗ್ರಹವಿರುವದು ಇಲ್ಲಿ ಶಿಲಾಶಾಸನಗಳು ಅನೇಕವಿರುವವು.

ಆಲಯಕ್ಕೆ ಪಶ್ಚಿಮ ದಿಕ್ಕಿನಲ್ಲಿ ಸೊಗಸಾದ ಶಿಲಾಬಲಿಪೀಠವು ಒಂದು ಇರುವದು. ಉತ್ಸವ ವಿಗ್ರಹಗಳಿಗೆ ಪೂಜೆಗಳು, ನೈವೇದ್ಯಗಳು ಇಲ್ಲಿಯೇ ನಡೆಯುವವು. ಈ ಬಲಿಪೀಠಕ್ಕೆ ಪಶ್ಚಿಮಕ್ಕೆ "ವಸಂತ ಮಂಟಪ" ವೆಂಬ ಒಂದು ಮಂಟಪ ವಿರುವದು ಭ್ರಮರಾಂಬಾ, ಮಲ್ಲಿಕಾರ್ಜುನ ವಿಗ್ರಹಗಳು ಇಲ್ಲಿಗೆ ಮೆರವಣಿಗೆಯ ಮೂಲಕ ತಪೋತ್ಸವಕ್ಕೆ ತೆಗೆದುಕೊಂಡು ಬರುತ್ತಾರೆ. ಈ ಮಂಟಪದಲ್ಲಿ ಕಲ್ಲಿನಿಂದ ಕಟ್ಟಲ್ಪಟ್ಟ ಕ್ರೀಡಾಸರೋವರವಿರುವದು. ಅದರ ಮಧ್ಯದಲ್ಲಿ ಒಂದು ಮಂಟಪ ವಿರುವದು. ಈಗ ಈ ಸರೋವರವು ಮಣ್ಣು, ಕಲ್ಲುಗಳಿಂದ ಹೂಳಿಕೊಂಡು ಹೋಗಿರುವದು ಆದರೆ ಪೂರ್ವದಲ್ಲಿ ಪರ್ವತದಮೇಲೆ ಒಂದು ಜಲಧಾರೆಯಿಂದ ಇದನ್ನು ಜಲಪೂರ್ಣವಾಗುವಂತೆ ಮಾಡುತ್ತಿದ್ದರಂತೆ.

ಮುಖಮಂಟಪಕ್ಕೆ ಮೂಡಲು ಭಾಗದಲ್ಲಿ ಮತ್ತೊಂದು ಶಿವಾಲಯವಿರುವದು. ಅದನ್ನೇ ಸಹಸ್ರಲಿಂಗ ದೇವಾಲಯವೆಂದು ನುಡಿಯುತ್ತಾರೆ. ಮೂರು ಹೆಡೆಗಳ ನಾಗಪೀಠದ ಮೇಲೆ ಈ ಲಿಂಗವು ಪ್ರತಿಷ್ಠಿಸಲ್ಪಟ್ಟಿರುವದು.

ಈ ಆವರಣದ ಗೋಡೆಗಳ ಬೆಂಬಲದಲ್ಲಿ ಅರ್ಚಕರು ಮುಂತಾದವರು ನಿವಾಸಮಾಡುವುದಕ್ಕೇರ್ಪಡಿಸಲ್ಪಟ್ಟಿದೆ. ಉತ್ತರ-ದಕ್ಷಿಣ ದಿಗ್ಭಾಗಗಳಲ್ಲಿಯು ನೈರುತ್ಯ-ಈಶಾನ್ಯ ಮೂಲೆಗಳಲ್ಲಿಯೂ ಯಾತ್ರಿಕರ ಸೌಕರ್ಯಾರ್ಥವಾಗಿ ಕೆಲವು ಬಾವಿಗಳಿರುವವು. ಇದಕ್ಕೆ "ಬೀಗಗಳ" ಬಾವಿಗಳೆಂದು ಹೆಸರು ಮಹಾವಿಷ್ಣುವಿನ ಅಂಶವುಳ್ಳ ಸೂರ್ಯನಾರಾಯಣನ ಕಿರಣಗಳು ಇದರ ಪ್ರಸಾರವಾಗದಂತೆ ಪೂರ್ವದಲ್ಲಿ ವೀರಶೈವರು ಈ ಬಾವಿಗಳಿಗೆ ಬೀಗಮುದ್ರೆ ಮಾಡಿ ಬಂಧಿಸುತ್ತಿದ್ದರಂತೆ ಆದುದರಿಂದಲೇ ಇವುಗಳಿಗೆ ಬೀಗಗಳ ಬಾವಿಗಳೆಂಬ ಹೆಸರೂ ರೂಢಿಯಾಗಿದೆಯೆಂದು ಹೇಳುತ್ತಾರೆ.

# ಇತರ ದೃಶ್ಯಗಳು



ಶ್ರೀಶೈಲ ಮಹಾಕ್ಷೇತ್ರದಲ್ಲಿ ಭ್ರಮರಾಂಬಾ, ಮಲ್ಲಿಕಾರ್ಜುನರ ದೇವಾಲಯಗಳೇ ಅಲ್ಲದೆ ನೋಡತಕ್ಕ ದೃಶ್ಯಗಳನೇಕವಿರುವವು ಅವುಗಳಲ್ಲಿ ಭೀಮನಕೊಳ, ಪಾತಾಳಗಂಗೆ, ಚಂದ್ರಕಾಂತಶಿಲೆ, ಮಾನಂದಿ, ಶ್ರೀಶೈಲದುರ್ಗ ಪ್ರಾಂತ ಭೂಮಿಗಳು ಮುಂತಾದವು ಮುಖ್ಯವಾಗಿರುವವು.

ಭೀಮನಕೊಳ, ತೋರಣಾಲದಿಂದ ಶ್ರೀಶೈಲಕ್ಕೆ ಹೋಗುವ ಮಾರ್ಗದಲ್ಲಿಯೇ ಕ್ಷೇತ್ರಕ್ಕೆ ನಾಲ್ಕು ಮೈಲಿಗಳ ಕೆಳಗೆ, ಎರಡು ಬೆಟ್ಟಗಳ ನಡುವೆ ಅಗಾಧವಾದ ಅಗಳ್ತೆಯಲ್ಲಿ ಒಂದು ಜಲಪ್ರದೇಶವು ಕಾಣುವದು. ಇದಕ್ಕೇನೇ ಭೀಮನಕೊಳವೆಂಬ ಹೆಸರು ಬಂದಿದೆ ಒಂದು ಬೆಟ್ಟದ ಗಂಗಾಝುರಿಯು ಈ ಕೊಳದ ಮೂಲಕವಾಗಿ ಪ್ರವಹಿಸುತ್ತಾ, ಪಶ್ಚಿಮದಲ್ಲಿ ಕೃಷ್ಣಾನದಿಯಲ್ಲಿ ಕೂಡುತ್ತದೆ. ಇಲ್ಲಿ ಇಳಿಯುವದು ಹತ್ತುವದು ತುಂಬಾ ಶ್ರಮಸಾಧ್ಯವಾದುದೆಂದು ಗ್ರಹಿಸತಕ್ಕದ್ದು.

ಇದಕ್ಕೆ ಭೀಮನಕೊಳವೆಂದು ಹೆಸರು ಬರುವದಕ್ಕೆ ಕಾರಣವಿರುವದು. ಪೂರ್ವದಲ್ಲಿ ಪಾಂಡವರು ವನವಾಸ ಮಾಡುತ್ತಲಿರುವ ಕಾಲಕ್ಕೆ ಇಲ್ಲಿಗೆ ಬಂದರಂತೆ. ಈ ಸ್ಥಳಕ್ಕೆ ಬರುವ ಹೊತ್ತಿಗೆ ಭೀಮನಿಗೆ ಅತ್ಯಂತ ದಾಹವಾಯಿತಂತೆ. ಕುಡಿಯಲಾಪ್ರಾಂತದಲ್ಲೆಲ್ಲಿಯೂ ನೀರು ಸಿಕ್ಕಲಿಲ್ಲವಂತೆ. ಆದುದರಿಂದಾತನಿಗೆ ಮಹತ್ತರವಾದಾಗ್ರಹ ಬಂದು ಭೂಮಿಯಲ್ಲಿ ತನ್ನ ಗದಾಪ್ರಹಾರ ಮಾಡಿ ಈ ಕೊಳವನ್ನು ಕಲ್ಪಿಸಿದನಂತೆ.

ಇಲ್ಲಿಯ ದೃಶ್ಯಗಳು ರಮಣೀಯವಾಗಿರುವವು. ಇಲ್ಲಿಯ ಎರಡು ಬೆಟ್ಟಗಳನ್ನು ಸೇರಿಸಿ ಒಂದು ಸೇತುವೆಯನ್ನು ನಿರ್ಮಿಸಬೇಕೆಂಬ ಆಲೋಚನೆಯನ್ನು ಪ್ರಭುತ್ವದವರು ಯೋಚಿಸುತ್ತಿರುವರೆಂದು ತಿಳಿಯಬರುತ್ತದೆ.

ಪಾತಾಳಗಂಗೆ, ಮಹಾಸ್ವಾಮಿ ಸನ್ನಿಧಿಗೆ ಸರಾಸರಿ ಎರಡು ಮೈಲುಗಳ

ದೂರದಲ್ಲಿರುವ ಅಗಳ್ತೆಯಲ್ಲಿ ಕೃಷ್ಣಾನದಿಯು ಪ್ರವಹಿಸುತ್ತಿರುವದು. ಅದೇ ಇಲ್ಲಿಯು "ಪಾತಾಳಗಂಗೆ"ಯೆಂದೂ ಹೆಸರ್ಗೊಂಡಿದೆ. ತುಂಬಾ ಆಳವಾದ ಪ್ರದೇಶದಲ್ಲಿ ಪ್ರವಹಿಸುವದರಿಂದ ಈ ಹೆಸರು ಬಂದಿರಬಹುದೇನೋ ? ಇದು ಅತ್ಯಂತ ಪ್ರಸಿದ್ಧ ಮತ್ತು ಪವಿತ್ರವಾದ ತೀರ್ಥವೆಂದು ಜನಜನಿತವಾಗಿ ಹೆಸರ್ಗೊಂಡಿರುವದು ಪಾಪಾತ್ಮರಾದವರು ನನ್ನನ್ನು ಮುಟ್ಟಿ ಸ್ನಾನ ಮಾಡುವದರಿಂದ ಅವರ ಪಾಪಗಳೆಲ್ಲವೂ ಕಳೆಯುವದಕ್ಕೆ ಗಂಗಾನದಿಗಿಂತಲೂ ಹೆಚ್ಚಾದುದೆಂತಲೂ, ಆ ಪಾಪಗಳನ್ನು ಕಳೆದುಕೊಳ್ಳುವದಕ್ಕಾಗಿ ಭಾಗೀರಥೀ ನದಿಯು ಈ ಪಾತಾಳಗಂಗೆಯಲ್ಲಿ ಮುಳುಗಿದಳೆಂದೂ ರೂಢಿಯಾಗಿ ಹರಡಿ ಕೊಂಡಿರುವ ಪ್ರಚಾರ.

ಇಲ್ಲಿಗೆ ಹೋಗುವದಕ್ಕೆ ತೊಂಬತ್ತುನೂರು ಸೋಪಾನಗಳನ್ನು ಇಳಿಯ ಬೇಕು. ಈ ಸೋಪಾನಗಳು ಸಹ ತುಂಬಾ ಎತ್ತರವಾಗಿರುವವು. ಅದು ದರಂದ ಇಳಿಯುವ ಕಾಲಕ್ಕೆ ಎಷ್ಟೋ ಎಚ್ಚರಿಕೆಯಿಂದಲೂ, ದೃಢಮಾನಸ ದಿಂದಲೂ ಇರಬೇಕು. ವಿಜಯನಗರ ಪ್ರಭುವಾದ ಶ್ರೀಕೃಷ್ಣದೇವರಾಯರು ಕಟ್ಟಿಸಿದ ಮಂಟಪಗಳೂ ಕೆಲವು ಮಾರ್ಗದ ಎರಡು ಪಕ್ಕಗಳಲ್ಲಿಯು ಇರು ವವು. ಇಲ್ಲಿಂದ ನೋಡಿದರೆ ತ್ರಿಮೂರ್ತಿಗಳ ಪರ್ವತಗಳ ಮಧ್ಯದಿಂದ ಅಂದರೆ ಬ್ರಹ್ಮ, ವಿಷ್ಣು, ರುದ್ರಯೆಂಬ ಗಿರಿಗಳ ಮಧ್ಯದಲ್ಲಿ ಕೃಷ್ಣಾ ಪ್ರವಂತಿಯು ಪ್ರವಹಿಸುವ ದೃಶ್ಯವು ಎಷ್ಟೋ ಹೃದಯಂಗಮವಾಗಿರುವದು. ಈ ಪ್ರಾಂತದಲ್ಲಿ ಯಾತ್ರಿಕರು ಕುಳಿತುಕೊಂಡು ಪ್ರಕೃತಿ ಸೌಂದರ್ಯವನ್ನು ನೋಡಲನುಕೂಲವಾಗುವಂತೆ ಕೆಲವು ವೇದಿಕೆಗಳು ಈ ಮಧ್ಯದಲ್ಲಿಯೇ ನಿರ್ಮಿಸಲ್ಪಟ್ಟಿರುವವು.

ಶ್ರೀಶೈಲ ಶಿಖರಕ್ಕೆ ಮುಂಭಾಗದಲ್ಲಿ ಒಂದು ಹಾಲುಕಲ್ಲಿನ ನಂದಿಯು ಈ ಮಧ್ಯ (ಅಂದರೆ ಸ್ವಲ್ಪಕಾಲದ ಹಿಂದೆಯೇ ಪ್ರತಿಷ್ಠಿಸಲ್ಪಟ್ಟಿರುವದು.) ಅದು ಎಷ್ಟೋ ಆಕರ್ಷಣೆಯುವಾಗಿರುವ ಕಳಾಭಾಗವೆನ್ನಬಹುದು. ಅದನ್ನು ದೇವಾದ್ಯಾಯ ಧರ್ಮಾದಾಯಶಾಖಾ ಡೆಪ್ಟಿ ಕಮಿಷನರ್ ಶ್ರೀ ಪೈಡಿ ಲಕ್ಷ್ಮಯ್ಯ M.L.A. ಯೆಂಬವರು ಇದನ್ನು ಪ್ರತಿಷ್ಠಿಸಿದರೆಂತಲೂ ಆಧುನಿಕವರ್ತಮಾನ ವಾಗಿದೆ. ಈ ನಂದಿಯು ಶೃಂಗಗಳ ಮಧ್ಯದಿಂದ ಶ್ರೀಶೈಲಾಲಯ ದೃಶ್ಯವನ್ನು

ನೋಡಲನುಕೂಲವಾಗಿ ಈ ಪ್ರತಿಷ್ಠೆಯು ನಡೆದಿದೆ. ಇಲ್ಲಿಂದ ನೋಡಿದರೆ ಪಾತಾಳಗಂಗಾಪ್ರವಂತಿಯು ಸಹಾ ಇನ್ನೊಂದು ಕಡೆ ಹೃದಯಾಕರ್ಷಕವಾಗಿ ಕಾಣುತ್ತದೆ.

ಪ್ರಧಾನ ದೇವಾಲಯಕ್ಕೆ ವಾಯುವ್ಯ ದಿಗ್ಭಾಗದಲ್ಲಿ ಮೈಲುದೂರದಲ್ಲಿ ವಿಭೂತಿಮಠವು, ಸಿದ್ಧರಮಠವು, ನಂದಿಗಳಮಠವು, ಘಂಟಾಕರ್ಣಮಠವು, ಸಾರಂಗಧರಮಠವು ಎಂಬ ಐದು ಮಠಗಳಿರುವವು. ಮತ್ತು ಈ ಕ್ಷೇತ್ರದಲ್ಲಿ ಪಾಂಡವರ ಆಲಯಗಳೂ, ಶಿಥಿಲವಾದ ಜಗದ್ಗುರು ಪಂಡಿತಾರಾಧ್ಯರ ಪೀಠವೂ, ಅನ್ನಪೂರ್ಣಾಲಯವೂ, ಕುಮಾರಸ್ವಾಮಿ ದೇವಸ್ಥಾನವೂ, ರಾಜ ರಾಜೇಶ್ವರಿ ದೇವಸ್ಥಾನವೂ, ಅಂಬಾಲಯವೂ, ಶಿವಾಜೀ ಮಂದಿರವೂ ಮುಂತಾದ ದೃಶ್ಯಗಳಿರುವವು. ತ್ರಿಮೂರ್ತಿಗಳ ಹೆಸರಿನಿಂದ ಪ್ರಸಿದ್ಧವಾದ ಗಿರಿಗಳೂ ಸಹಾ ದರ್ಶನೀಯವಾದವೇ! ಇವಲ್ಲದೆ ಇನ್ನೂ ಅಸಂಖ್ಯಾಕ ಗಳಾದ ದೇವಾಲಯಗಳೂ, ತೀರ್ಥಗಳೂ ಇರುವವು.

ಇಲ್ಲಿಯ ಶೈವಪೀಠಗಳಿಗೆ ಪ್ರತ್ಯೇಕವಾದ ಗೌರವವಿರುವದು. ಶೈವ ಪೀಠಾಧಿಪತಿಗಳೂ ಶ್ರೀ ಶ್ರೀ ಶ್ರೀಜಗದ್ಗುರು ಪಂಡಿತಾರಾಧ್ಯ ಸೂರ್ಯಸಿಂಹಾ ಸನ ಪೀಠಾಧಿಪತಿಗಳಿಗೆ ಪ್ರತ್ಯೇಕವಾದ ಗೌರವವಿರುವದು. ಪರಮ ಶಿವಭಕ್ತ ರಾದ ಶ್ರೀ ಸ್ವಾಮಿಗಳವರೂ ಶ್ರೀಶೈಲಕ್ಕೆ ಪೂರ್ವದ ಉಚ್ಛಸ್ಥಿತಿಯನ್ನುಂಟು ಮಾಡುವುದಕ್ಕೆ ಸರ್ವವಿದದಿಂದಲೂ ಯತ್ನಿಸುತ್ತಿರುವರು. ಈ ಸ್ವಾಮಿಗಳು ಶ್ರೀಶೈಲ ಜೀರ್ಣೋದ್ಧಾರದ ಸಂಘದ ಕಾರ್ಯನಿರ್ವಾಹಕರಾಗಿರುವರು.

ಶ್ರೀ ಪರ್ವತಪುರಾಣದಲ್ಲಿರುವ ವರ್ಣನೆಗಳನ್ನು ಹಿಡಿದು ನೋಡಿದರೆ ತ್ರಿಪುರಾಂತಕವು, ವೈಡೂರ್ಯಶಿಖರವು, ಇಲ್ಲಿ ದೇವೇಂದ್ರನು ನಿವಾಸಮಾಡು ವನು. ಪಶ್ಚಿಮ ಶಿಖರವು ಬ್ರಹ್ಮೇಶ್ವರವು, ಇಲ್ಲಿ ಬ್ರಹ್ಮನು ನಿವಾಸಮಾಡುವನು. ಮಹೇಶ್ವರವು ಮಾಣಿಕ್ಯಶಿಖರವು, ಇಲ್ಲಿ ಮರ್ತ್ಯಗಣಗಳು ನಿವಾಸಮಾಡುವರು. ಪುಷ್ಪಶೈಲಶಿಖರದಲ್ಲಿ ಪ್ರವಾಳಗಳಿರುವಂತೆ, ಸ್ಕಂದಸೋಮೇಶ್ವರ, ತಾಪ್ಯ ಶೃಂಗ, ಇಲ್ಲಿ ಕುಮಾರಸ್ವಾಮಿಯು ನಿವಾಸಮಾಡುವನು. ದೇವಮುನಿಸ್ತೋ ಮದಿಂದ ಸೇವಿಸಲ್ಪಡುತ್ತಿರುವುದೇ ಹೇಮಶೃಂಗವು ಅಹೋಬಲವು ಮರಕತ

ಶಿಖರವು. ಇಲ್ಲಿ ಮಹಾವಿಷ್ಣುವು ನಿವಾಸಮಾಡುವನು. ನಂದಿಮಂಡಲವು ವಜ ಶೃಂಗವು, ಇಲ್ಲಿ ಸಂದೀಶ್ವರನು ನಿವಾಸಮಾಡುವನು.

ಈ ಶಿಖರದಲ್ಲಿರುವ ತೀರ್ಥಗಳನ್ನು, ತೀರ್ಥದ ಮಹಿಮೆಗಳನ್ನು ಆ ಸ್ಥಲ ಪುರಾಣದಲ್ಲಿಯೇ ವಿವರಿಸಲ್ಪಟ್ಟಿವೆ. ಮೊದಲನೇ ಶಿಖರದಲ್ಲಿ ನಂದಿ, ಶುಕ್ಲ ತೀರ್ಥಗಳಿರುವವು. ಎರಡನೇ ಶಿಖರದ ಮೇಲೆ ಕೋಮಲಕೀರ್ತಿ, ಗಳಗ ಯೆಂಬ ತೀರ್ಥಗಳಿರುವವು. ಮೂರನೇ ಶಿಖರದ ಮೇಲೆ ತಾಮ್ರ, ವಿಚಿತ್ರ, ಜಾಹ್ನವಿ ಎಂಬ ತೀರ್ಥಗಳಿರುವವು. ನಾಲ್ಕನೇ ಶಿಖರದ ಮೇಲೆ ಭಾರತಿ, ಚಾರುಘೋಷಿಣಿ, ಅರುಷಿಣಿಯೆಂಬ ತೀರ್ಥಗಳಿರುವವು. ಐದನೇ ಶಿಖರದ ಮೇಲೆ ಮಹಾಜ್ಯೋತಿ. ಜಯ, ವಿಜಯಯೆಂಬ ತೀರ್ಥಗಳಿರುವವು. ಆರನೇ ಶಿಖರದ ಮೇಲೆ ವಕ್ರ, ಪೃಥು, ಅಭಿಸ್ಮೃತಿಯೆಂಬ ತೀರ್ಥಗಳಿರುವವು. ಏಳನೇ ಶಿಖರದಲ್ಲಿ ಜ್ಯೋತಿ, ಅರ್ಚಿ, ಚತುರ್ವಕ್ರಯೆಂಬ ತೀರ್ಥಗಳಿರುವವು. ಎಂಟನೇ ಶಿಖರದ ಮೇಲೆ ಋಕ್ಷಿ, ಕ್ಷೇಮ, ಶುಕ್ಲಯೆಂಬ ತೀರ್ಥಗಳಿರುವವು.

ಮತ್ತು ಇಲ್ಲಿ ಶಿಖರದ ಮೇಲಿಂದ ಹಾರಿ ಸಾಯುವ ಬೆಟ್ಟದ ಹೊಳೆ ಒಂದು ಇರುವದು. ಬೆಟ್ಟದ ಝುರಿಯಿಂದ ಆ ಹೊಳೆಯೊಳಕ್ಕೆ ಹಾರಿ ಸತ್ತರೆ ಮುಕ್ತಿ ಲಭಿಸುವದೆಂದು ತಿಳಿದು ಕೆಲವರು ಭಕ್ತರು ಸಾಹಸದಿಂದ ಹಾಗೆ ಮಾಡುತ್ತಿದ್ದರಂತೆ.

ಈ ತೀರ್ಥಗಳಲ್ಲಿ ಆಯಾ ಮಾಸಗಳಲ್ಲಿ ಸ್ನಾನ ಮಾಡಿದರೆ ಉಂಟಾಗುವ ಫಲಗಳನ್ನು, ತೀರ್ಥಮಾಹಾತ್ಮ್ಯಗಳನ್ನು ಶ್ರೀ ಪರ್ವತದ ಸ್ಥಲ ಪುರಾಣದಲ್ಲೇ ವಿಶೇಷವಾಗಿ ವಿವರಿಸಿರುವರು. ಆ ವಿಶೇಷಗಳನ್ನೆಲ್ಲವೂ ಇಲ್ಲಿ ವಿವರಿಸುತ್ತ ಹೋದರೆ ಮಹಾಗ್ರಂಥವಾಗುವದಲ್ಲದೆ ಪಾಠಕಮಹಾಶಯರಿಗೆ ಸಹಾ ಅತಿಶಯೋಕ್ತಿಯಾಗಿ ಕಾಣಬಹುದು. ಪುರಾಣಗಳಲ್ಲಿ ವಿಶದಗೊಳಿಸಿದ ವಿವರಗಳನ್ನೆಲ್ಲವೂ ಪ್ರತ್ಯಕ್ಷವಾಗಿ ಪರಿಶೀಲಿಸುವುದಕ್ಕೆ ಹೋದರೂ ಅವುಗಳನ್ನು ಗುರ್ತಿಸುವುದಾಗಲಿ, ಆ ತೀರ್ಥಗಳಿವೆಂದು ತಿಳಿದುಕೊಳ್ಳುವುದಕ್ಕಾಗಲಿ, ಅವುಗಳ ಹತ್ತಿರಕ್ಕೆ ಹೋಗುವುದಕ್ಕಾಗಲಿ ಸಾಧ್ಯವಾಗುವಹಾಗಿಲ್ಲ.

# ಶ್ರೀಗಿರಿಯ ಶಿಲ್ಪಚಾತುರ್ಯ



ಶ್ರೀಗಿರಿಯ ಶಿಲ್ಪಚಾತುರ್ಯವನ್ನು ತಿಳಿದುಕೊಳ್ಳಬೇಕಾದರೆ ಅಲ್ಲಿಯ ದೇವಾಲಯುಗಳು, ದುರ್ಗಗಳು ಮತ್ತು ಪ್ರಾಕಾರದ ಗೋಡೆಗಳ ಮೇಲಿರುವ ಶಿಲ್ಪಗಳೂ ಶಿಥಿಲಾವಸ್ಥೆಯಲ್ಲಿರುವ ಮಂದಿರಗಳೂ ಇನ್ನು ಕೆಲಕೆಲವು ಶಿಥಿಲ ಗಳಲ್ಲಿ ಕಂಡುಬರುವ ಚಿತ್ರಗಳೇ ಆಧಾರಗಳಾಗಿವೆ.

ಶ್ರೀಶೈಲ ಪರ್ವತಕ್ಕೆ ಹೋಗುವ ಕಾಲಕ್ಕೆ ಹಾದಿಯುದ್ದಕ್ಕೂ ಶಿಥಿಲ ವಾದ ಆಲಯುಗಳೂ, ಪ್ರಾಕಾರದ ದ್ವಾರಗಳೂ ಕೆಲವು ಮಂಟಪಗಳೂ ಕಾಣಿ ಸುತ್ತವೆ. ಇವುಗಳನ್ನು ಹಿಡಿದು ನೋಡಿದರೆ ಒಂದಾನೊಂದು ಕಾಲದಲ್ಲಿ ಶ್ರೀಶೈಲವು ಅತ್ಯುಚ್ಚಸ್ಥಿತಿಯಲ್ಲಿದ್ದಿತೆಂದು ಸುಸ್ಪಷ್ಟವಾಗುತ್ತದೆ. ಈ ಶಿಥಿಲದ ಚಿತ್ರಗಳೂ ಈ ನಿರ್ಮಾಣಗಳೂ ಕ್ರೀ ಶ. ೧೪ ನೇ ಶತಮಾನದಿಂದೀಚೆಗೆ ನಿರ್ಮಾಣವಾದಂತೆ ಕಂಡುಬರುತ್ತದೆ.

ಕ್ಷೇತ್ರದಲ್ಲಿರುವ ನಿರ್ಮಾಣಗಳೆಲ್ಲವೂ ಶಿಲ್ಪಕಲೆಯಿಂದಲೇ ಪ್ರಕಾಶಿಸುತ್ತಿ ರುವವು. ಪ್ರಾಕಾರದ ಕುಡ್ಯಗಳು (ಗೋಡೆಗಳು) ದೊಡ್ಡ ದೊಡ್ಡ ಶಿಲೆಗಳಿಂದ ನಿರ್ಮಿಸಲ್ಪಟ್ಟಿರುವದರಿಂದ ಆ ಶಿಲೆಗಳ ಮೇಲೆ ರಥ, ಗಜ ತುರಗ, ಪದಾತಿ ಗಳ ಸಾಲುಗಳೂ, ಮನುಷ್ಯರ ಚಿತ್ರಗಳೂ, ಭಕ್ತರ ಮಹಾತ್ಮ್ಯಗಳೂ, ದೈವಾಂಶಸಂಭೂತರ ಪದ್ಧತಿಗಳೂ ಭವತಾರಣೋಪಾಯುಗಳೂ, ಭವಸಾಗರ ವನ್ನು ದಾಂಟಿರುವವರ ರೂಪಗಳೂ ಸೊಗಸಾಗಿ ಕೆತ್ತಲ್ಪಟ್ಟಿರುವವು.

ಶೈವವಿಗ್ರಹಗಳನ್ನು ಕುರಿತಾದ ವಿವರಗಳೂ ತಿಳಿದುಕೊಳ್ಳಲಪೇಕ್ಷಿಸುವವ ರಿಗೆ ಇಲ್ಲಿಯ ಶಿಲ್ಪಗಳು ಪ್ರದರ್ಶನಾಲಯಗಳಾಗಿರಿಸುವದಕ್ಕೆ ಅನುಕೂಲ ವಾಗಿರುವವು. ಇಲ್ಲಿ ಶಿವನ ಪಂಚವಿಂಶತಿ ಲೀಲೆಗಳೆಲ್ಲವು ಚಿತ್ರವಾಗಿರು ವವು. ಭಾರತ, ರಾಮಾಯಣಾದಿ ಕಥೆಗಳು ಪರಮ ಶಿವನ ಕಥೆಗಳೆಲ್ಲವು ಲಿಖಿ ಸಲ್ಪಟ್ಟಿರುವವು. ಇವೆಲ್ಲವು ಸೂಕ್ಷ್ಮವಾದ ವಿವರಣೆಯಿಂದ ಕೆತ್ತಲ್ಪಟ್ಟಿರುವವು. ಶ್ರೀಗಿರಿಜಾ ವಿವಾಹವು, ಅರ್ಜುನ ತಪಸ್ಸು, ವಿಶ್ವಕರ್ಮನು ಶಿವನಿಗೆ ಮಾಡಿ

ರುವ ತುಲಾಭಾರವು, ಶಿವನ ಭಿಕ್ಷಾಟನವು, ದಾರುಕಾವನ ವಿಹಾರವು ಶಿವನು ಮಾರ್ಕಂಡೇಯನನ್ನು ಸಂರಕ್ಷಿಸುವದೇ ಮುಂತಾದ ಕಥೆಗಳೆಲ್ಲವೂ ತುಂಬಾ ಸೊಗಸಾಗಿ ಕೆತ್ತಲ್ಪಟ್ಟಿರುವವು. ಆಲಯ ವಿಮಾನ ಶಿಲ್ಪವು ಪಲ್ಲವರ ಕಾಲದಲ್ಲಿ ಚಿತ್ರಿತವಾಗಿದೆಯೆಂದು ಕೆಲವರು, ಚಾಲುಕ್ಯರ ಕಾಲದಲ್ಲಿ ಚಿತ್ರಿತವಾಗಿದೆ ಎಂದು ಕೆಲವರು ಹೇಳುತ್ತಾರೆ.

ದುರ್ಗದ ಕುಡ್ಯದ ಕೆಳಭಾಗದ ಸಾಲಿನಲ್ಲಿ ಆನೆಗಳ ಚಿತ್ರಗಳಿರುವವು. ಆ ಆನೆಗಳು ಸೊಂಡಿಲುಗಳಿಂದ ವೃಕ್ಷಗಳನ್ನು ಹಿಡಿದುಕೊಂಡಂತಿರುವದು. ಅದಕ್ಕೆ ಮೇಲಣ ಭಾಗದಲ್ಲಿ ಕುದುರೆಗಳ ಚಿತ್ರಗಳೂ, ಬೇಟೆಯಾಡುವ ಚಿತ್ರಗಳೂ, ಖಡ್ಗ, ಕೃಪಾಣಾದಿಗಳನ್ನು ಧರಿಸಿ ಯುದ್ಧಸನ್ನದ್ಧರಾದ ವೀರರ ಚಿತ್ರಗಳೂ ಎಷ್ಟೋ ಆಕರ್ಷಣೀಯವಾಗಿರುವವು.

ಕಲ್ಲುಗಳ ಮೇಲೆ ಕೆತ್ತಲ್ಪಟ್ಟ ಶಿಲ್ಪಗಳೇ ಅಲ್ಲದೆ, ಹಿತ್ತಾಳಿಯಿಂದ ತಯಾ ಮಾಡಿದ ಶಿಲ್ಪಗಳು ಸಹಾ ಇಲ್ಲಿ ಅಸಂಖ್ಯಾಕವಾಗಿರುವವು. ಇವುಗಳನ್ನೆಲ್ಲವೂ ಪರಿಶೀಲಿಸಿದರೆ ಇಲ್ಲಿ ಒಂದು ಪ್ರದರ್ಶನಶಾಲೆಯೆಂಬುವಂತೆ ಭಾಸವಾಗುತ್ತದೆ. ವಿಗ್ರಹಗಳಲ್ಲಿ ನಟರಾಜಸ್ವಾಮಿಯ ವಿಗ್ರಹವು ಎಷ್ಟೋ ಆಕರ್ಷಣೀಯವಾಗಿದ್ದು ನೋಟಕರ ಭಾವಾನಂದವನ್ನು ದ್ವಿಗುಣಿತವನ್ನಾಗಿ ಮಾಡುತ್ತಲಿವೆ.

## ಉತ್ಸವಗಳು

++++++++

ದಿವ್ಯವಾದ ಕ್ಷೇತ್ರಸ್ಥಲಗಳಲ್ಲಿ ಪ್ರತಿನಿತ್ಯವು ಯಾವುದೋ ಒಂದು ಉತ್ಸವವು ನಡೆಯುವದು. ಪರಂಪರೆಯಾಗಿ ಬಂದ ಸಂಪ್ರದಾಯ ಅಂದರೆ ಈ ಕ್ಷೇತ್ರವು ದುರ್ಗಮಗಳಾದ ಪರ್ವತಗಳ ಮಧ್ಯದಲ್ಲಿರುವುದರಿಂದ ಪ್ರಧಾನವಾದ ಪರ್ವದಿನಗಳಲ್ಲಿ ಮಾತ್ರವೇ ಉತ್ಸವಾದಿಗಳು ನಡೆಯುತ್ತಲಿರುವವು. ಇತರ ಕಾಲಗಳಲ್ಲಿ ಈ ಕ್ಷೇತ್ರಕ್ಕೆ ಯಾತ್ರಿಕರು ಬರುವದು ಬಹಳ ವಿರಳ. ಇಲ್ಲಿ ಪ್ರಧಾನೋತ್ಸವಗಳೆಂದರೆ ಮಕರಸಂಕ್ರಾಂತಿ, ಶಿವರಾತ್ರಿ, ಸಂವತ್ಸರಾದಿ ಹಬ್ಬ

ಗಳು ಮಾತ್ರವೇ ! ಮತ್ತು ಚೈತ್ರ ಶುದ್ಧ ಪೂರ್ಣಿಮಾ ದಿನದಲ್ಲಿ ಭ್ರಮ-ರಾಂಬಾದೇವಿ ಸನ್ನಿಧಿಯಲ್ಲಿ ಕುಂಭೋತ್ಸವವು ನಡೆಯುತ್ತದೆ. ಸಂಕ್ರಮಣದಿಂದ ಚೈತ್ರಶುದ್ಧ ಪೂರ್ಣಿಮೆಯ ವರೆಗೂ ಯಾತ್ರಿಕರ ಗಮನಾಗಮನಗಳು ಹೆಚ್ಚಾಗಿ ನಡೆಯುತ್ತವೆ. ಈ ಉತ್ಸವಗಳಿಗೆ ದಕ್ಷಿಣ ದೇಶದವರೆಲ್ಲರೂ ಅಂದರೆ ಆಂಧ್ರರು, ಕರ್ನಾಟಕರು, ತಮಿಳರು, ಮಹಾರಾಷ್ಟ್ರರು ಬರುವರು. ಶಿವರಾತ್ರಿ ಉತ್ಸವಕ್ಕೆ ಮತ್ತು ಯುಗಾದಿ ಹಬ್ಬಕ್ಕೆ ಕರ್ನಾಟಕರು ಹೆಚ್ಚಾಗಿ ಬರುತ್ತಿರುವರು. ಆಂಧ್ರದೇಶದ ಸಮಸ್ತ ಪ್ರಾಂತದವರು ಶಿವರಾತ್ರಿಗೆ ವಿಶೇಷವಾಗಿ ಬರುತ್ತಾರೆ. ಇಲ್ಲಿ ಶಿವರಾತ್ರಿಯೇ ಅತ್ಯಂತ ಪ್ರಧಾನವಾಗಿರುವದರಿಂದ ಈ ಉತ್ಸವಕ್ಕೆ ದಕ್ಷಿಣಾದಿಯ ಭಕ್ತರೆಲ್ಲರೂ ಮಹತ್ತರವಾದ ಕುತೂಹಲದಿಂದ ಬರುತ್ತಿರುವರು.

ಶರಣಸತಿ ಲಿಂಗಪತಿಯೆಂಬ ಪ್ರಮಾಣವಾಕ್ಯವಿದವದರಿಂದ ಭಕ್ತಪರಾಧೀನನಾದ ಶಂಕರನು ತನ್ನನ್ನು ಸೇವಿಸುವ ಭಕ್ತರ ವಿಷಯದಲ್ಲಿ ಅಧಿಕವಾದ ಪ್ರೀತಿಯನ್ನು ತೋರ್ಪಡಿಸುವನು. ಆತನು ಭಕ್ತರ ಭಕ್ತಿಭಾವವನ್ನು ಪರೀಕ್ಷಿಸಿ ಅವರವರಿಗೆ ತಕ್ಕ ವರಗಳನ್ನು (ಫಲಗಳನ್ನು) ಕೊಡುತ್ತಾನೆ. ಭಕ್ತರೆಷ್ಟು ಕಷ್ಟಪಟ್ಟು ಪರಮಾತ್ಮನ ಸನ್ನಿಧಿಗೆ ಹೋಗುತ್ತಾರೆಯೋ, ಪರಮಾತ್ಮನಿಗೆ ಭಕ್ತರ ಮೇಲೆ ಅಷ್ಟು ವಾತ್ಸಲ್ಯವು ಇರುತ್ತದೆ. ಮಿಕ್ಕ ಕ್ಷೇತ್ರಗಳಿಗೆ ಸುಲಭವಾಗಿ ಹೋಗಬಹುದು. ಶ್ರೀಶೈಲಕ್ಕೆ ಮಾತ್ರ ಸುಲಭವಾಗಿ ಹೋಗುವಂತಿಲ್ಲ. ಅಲ್ಲಿಯ ಪರಮಾತ್ಮನನ್ನು ನೋಡಲು ತುಂಬಾ ಶ್ರಮತೆಗೆದುಕೊಳ್ಳಬೇಕಾಗಿದೆ. ವಿಶೇಷವಾದ ಖರ್ಚು, ಮಹತ್ತರವಾದ ಪ್ರಮಾದಗಳು ಇಂತಿಷ್ಟು ಕಷ್ಟಗಳನ್ನು ಸಹಿಸಿ ಶ್ರೀ ಮಲ್ಲಿಕಾರ್ಜುನ ಪರ್ವತವನ್ನು ಸಂದರ್ಶಿಸುವುದರಿಂದ ಆ ಪರಶಿವನಿಗೆ ವಾತ್ಸಲ್ಯವು ಹುಟ್ಟದಂತೆ ಇದ್ದೀತೇ! ಮತ್ತು ಶಿವರಾತ್ರಿಯ ಪರ್ವದಿನವು ಶ್ರೀಶಂಕರನಿಗೆ ಅಪರಮಿತ ಪ್ರೀತಿಯನ್ನು ಹುಟ್ಟಿಸುವ ದಿನವಾಗಿದೆ. ಆ ದಿವಸ ಶ್ರೀಶೈಲಕ್ಕೆ ಹೋಗಿ ಶ್ರೀಮಲ್ಲಿಕಾರ್ಜುನನನ್ನು ಸಂದರ್ಶಿಸಿದರೆ ಆ ಮಹಾದೇವನಿಗೆ ಅಪರಿಮಿತವಾದ ಕಾರುಣ್ಯವು ಸಹಜವಾಗಿ ಹುಟ್ಟುವುದೆಂದರೆ ಆಶ್ಚರ್ಯವೇನು ಅಲ್ಲ.

ಮಹಾಶಿವರಾತ್ರಿಯ ಪುಣ್ಯದಿವಸದಲ್ಲಿ ಶ್ರೀಶೈಲಮಲ್ಲಿಕಾರ್ಜುನ ಸ್ವಾಮಿಯನ್ನು ಆರಾಧನೆಗಳಿಂದಲೂ ಕೈವಲ್ಯವನ್ನು ಸಾಧಿಸಬಹುದೆಂದು ಪುರಾಣಗಳು

ಹೇಳುತ್ತಲಿರುವವು. ಪರ್ವತವನ್ನಿಳಿದು ಪಾತಾಳಗಂಗೆಗೆ ಹೋಗಿ, ಸ್ನಾನ ಮಾಡಿ ಆ ತೀರ್ಥವನ್ನು ತಂದು, ಅದರಿಂದ ಪರ್ವತಲಿಂಗವನ್ನು ಅಭಿಷೇಕ ಮಾಡಿದಾಗಲೇ ಶಿವರಾತ್ರಿ ವ್ರತವು ಪೂರ್ತಿಯಾಯಿತೆಂದು ಹಿರಿಯರು ಹೇಳುತ್ತಿರುವರು.

## ಇದಕ್ಕೊಂದು ಪೌರಾಣಿಕ ಇತಿಹಾಸ



ಒಂದಾನೊಂದು ಕಾಲಕ್ಕೆ ಪ್ರಳಯಕಾಲದಲ್ಲಿ ತನ್ನ ಸಂಹಾರ ಕಾರ್ಯವನ್ನು ನಿರ್ವಹಿಸಿ ಪರಶಿವನು ರಾತ್ರಿ ಸಮಯದಲ್ಲಿ ಭಯಂಕರವಾಗಿ ತಾಂಡವ ನಾಟ್ಯಮಾಡುತ್ತಿದ್ದನು. ಆಗ ಜೀವರಾಶಿಯೆಲ್ಲವೂ ಪಿಂಡರೂಪದಿಂದೇಕವಾಗಿ ಬಹುಕಾಲ ಲಯಸ್ಥಿತಿಯಲ್ಲಿಯೇ ಇದ್ದಿತು. ಆಗ ಸರ್ವಮಂಗಳಾಯೆಂಬ ಸಾರ್ಥಕನಾಮಧೇಯವನ್ನಾಂತಿರುವ ಪಾರ್ವತಿದೇವಿಯು ಪರಮೇಶ್ವರನನ್ನು ನೋಡಿ, ಜೀವರಾಶಿಗಳು ಪ್ರಪಂಚದಲ್ಲಿರುವ ಅಲ್ಪಕಾಲದಲ್ಲಿ ಲಯಕರ್ತೃವಾದ (ಮಹಾದೇವನಾದ ನಿನ್ನನ್ನು ಸೇವಿಸಿ ಪಾಪಗಳನ್ನು ಕಳೆದುಕೊಳ್ಳುವುದಕ್ಕೆ ಒಂದು ಸಮಯವನ್ನು ನಿರ್ಣಯಿಸಬೇಕೆಂದು ಪ್ರಾರ್ಥಿಸಿದಳಂತೆ ಅವಾಕ್ಯಗಳನ್ನಾಲಿಸಿ ಆಕೆಯುವರ ಪ್ರಾರ್ಥನೆಯನ್ನು ಮನ್ನಿಸಿ, ಮಹಾಶಿವರಾತ್ರಿ ದಿನ ತನ್ನನ್ನು ಪೂಜಿಸಿದವರಿಗೆ (ಭಕ್ತರಿಗೆ) ಯಾವ ವಿಧವಾದ ಉಪದ್ರವಗಳು ಸಂಭವಿಸುವುದಿಲ್ಲವೆಂತಲೂ, ಮುಕ್ತಿಲಭಿಸುವುದೆಂತಲೂ ಹೇಳಿದನು. ಮತ್ತು ಪ್ರಳಯವು ರಾತ್ರಿಹೊತ್ತಿನಲ್ಲಿಯೇ ನಡೆದಿರುವುದರಿಂದ ತನ್ನ ಆರಾಧನೆಯನ್ನು ರಾತ್ರಿ ಸಮಯದಲ್ಲಿಯೇ ನಡೆಯಿಸಬೇಕೆಂದು ನಿರ್ಣಯಿಸದನು. ಆ ಶಿವರಾಧಾನೆಗೆ ಅನುಕೂಲವಾದ ರಾತ್ರಿಯೇ ಮಹಾಶಿವರಾತ್ರಿಯೆಂದು ಪ್ರಸಿದ್ಧವಾಯಿತು. ಅಂತಹ ಪರ್ವದಿನದಲ್ಲಿ ಶ್ರೀಶೈಲದಲ್ಲಿ ಪರ್ವತಲಿಂಗವನ್ನು ಆರಾಧಿಸಿದರೆ ಜನರು ಜನನ–ಮರಣಾದಿ ಮಹಾಕ್ಲೇಶಗಳಿಂದ ತುಂಬಿದ ಸಂಸಾರಕ್ಕೆ ದೂರರಾಗಿ ಶಿವಸಾಯುಜ್ಯವನ್ನು ಹೊಂದಲುಳ್ಳವರು. ಶಿವನಿರ್ದಿಷ್ಟವಾದ ಈ ಪದ್ಧತಿಯನ್ನು ಶಿವರಾತ್ರಿ ದಿವಸದಲ್ಲಿ ಶ್ರೀಶೈಲದಲ್ಲಿ ಭಗವದಾರಾಧನೆ ಮಾಡಿದವರಿಗೆ ಮುಕ್ತ್ಯಂಗನೆಯುವರಿಸುವುದೇನಾಶ್ಚರ್ಯ ?

ಉತ್ಸವಗಳ ವಿಷಯದಲ್ಲಿ ಮಿಕ್ಕ ದೇವಾಲಯಗಳಿಗೂ ಶ್ರೀಶೈಲಕ್ಕೂ ಒಂದು ವ್ಯತ್ಯಾಸವಿರುವದು. ಸಾಧಾರಣವಾಗಿ ದೇವಾಲಯವೆಲ್ಲವೂ ಉತ್ಸವ ಸಮಯಗಳಲ್ಲಿ ಮೆರವಣಿಗೆ ಮಾಡುವದಕ್ಕು ಕಲ್ಯಾಣಮಹೋತ್ಸವಗಳು ನೆರವೇರಿಸುವದಕ್ಕೆಉತ್ಸವ ವಿಗ್ರಹಗಳು ಪ್ರತ್ಯೇಕವಾಗಿರುತ್ತವೆ. ಮೂಲ ವಿಗ್ರಹಗಳ ಯಾವ ಉತ್ಸವವೂ ಇರುವುದಿಲ್ಲ. ಈ ಶ್ರೀಶೈಲದಲ್ಲಿ ಉತ್ಸವ ವಿಗ್ರಹಗಳನ್ನು ಸಹಾ ಒಂದು ಕಡೆ ಸ್ಥಿರವಾಗಿರಿಸುತ್ತಾರೆ. ಅವುಗಳಿಗೆ ಮೆರವಣಿಗೆ ಮುಂತಾದವುಗಳು ನಡೆಯುವದಿಲ್ಲ. ಉತ್ಸವಗಳಿಗಾಗಿ ಪ್ರತ್ಯೇಕವಾದ ವಿಗ್ರಹಗಳಿರುತ್ತವೆ.

ಭ್ರಮರಾಂಬಾದೇವಿಯ ವರವಿವಾಹ ಮಹೋತ್ಸವವು ಇಲ್ಲಿ ಶಿವರಾತ್ರಿ ಮಹೋತ್ಸವ ಸಮಯದಲ್ಲೇ ನಡೆಯುತ್ತದೆ.

ಶಿವರಾತ್ರಿ ಸಂದರ್ಭದಲ್ಲಿ ಭ್ರಮರಾಂಬಾಲಯದಲ್ಲಿ "ಮಂಗಳಪಾಗಾ" ಉತ್ಸವಕ್ಕೆ ಇಲ್ಲಿ ಪ್ರಾಮುಖ್ಯತೆ ಇರುವದು. ಶಿವರಾತ್ರಿಯು ಇನ್ನು ಕೆಲವು ದಿವಸಗಳ ಅವಧಿಯಲ್ಲಿರುವಾಗಲೇ ಅಂದರೆ ಕೆಲವು ದಿನಗಳಿಗೆ ಮುಂಚೆಯೇ ಭ್ರಮರಾಂಬಾದೇವಿ ಸನ್ನಿಧಿಯಲ್ಲಿ ಈ "ಮಂಗಳಪಾಗಾ" ಸಮರ್ಪಣ ಕೈಂಕರ್ಯವು ನಡೆಯುತ್ತದೆ. ಒಂದು ದಿನಕ್ಕೆ ಒಂದು ಮೊಳ ಪಾಗಾವನ್ನು ಒಂದು ವರ್ಷದ ಲೆಕ್ಕದಂತೆ ಮುನ್ನೂರರವತ್ತು ಮೊಳದ ಪಾಗಾ (ಒಂದು ಬಟ್ಟೆಯನ್ನು ) ಮೊದಲೇ ನೇಯಿಸಿ ಸಿದ್ಧಮಾಡಿಸಿಡುವರು. ಆ ವಸ್ತ್ರವನ್ನು ದೇವಾಲಯದ ಗೋಪುರದ ಮೇಲಿರುವ ಕಲಶದಿಂದ ಮುಖಮಂಟಪದ ಮೇಲಿದ್ದ ನಂದೀಶ್ವರನ ಕಂಠಕ್ಕೆ ಪಾಗಾವನ್ನು ಸುತ್ತಿದಂತೆ ಸುತ್ತುವದು ಒಂದು ಆಚಾರವಾಗಿ ಬಂದಿದೆ. ಶಿವರಾತ್ರಿ ಉತ್ಸವಗಳು ಮುಗಿದ ಬಳಿಕ ಈ ವಸ್ತ್ರವನ್ನು ಬಿಚ್ಚಿ ಚಿಕ್ಕ ಚಿಕ್ಕ ತುಂಡುಗಳನ್ನಾಗಿ ಮಾಡಿ ದೇವೀ ಪ್ರಸಾದ ರೂಪವಾಗಿ ಭಕ್ತರಿಗೆ ಕೊಡುತ್ತಾರೆ.

ಚೈತ್ರ ಶುದ್ಧ ಪೂರ್ಣಿಮೆಯ ದಿವಸ ಭ್ರಮರಾಂಬಾದೇವಿಯ ಸನ್ನಿಧಾನದಲ್ಲಿ ಕುಂಭೋತ್ಸವವು ನಡೆಯುತ್ತದೆ. ಆಗ ಶ್ರೀದೇವೀ ಸನ್ನಿಧಿಯಲ್ಲಿ ಕುಂಭವನ್ನಿರಿಸುವದು, ಬಲಿಹರಣವೇ ಮುಂತಾದ ಪೂಜಾ ಪದ್ಧತಿಯೆಲ್ಲವೂ ಶಾಕ್ತೇಯ ಪದ್ಧತಿಯಂತೆಯೇ ನಡೆಯುವದು.

ಇತ್ತೀಚೆಗೆ ಕೆಲವು ವರ್ಷಗಳಿಂದಲೂ ಈ ಕ್ಷೇತ್ರದಲ್ಲಿ ಚೈತ್ರ ಶುದ್ಧ ಪಂಚಮಿ ಮೊದಲ್ಗೊಂಡು ನವಮಿಯ ವರೆಗೂ ಪಾಂಚಾಹ್ನಿಕ ದೀಕ್ಷೆಯಿಂದ ಚಂಡಿಯಾಗವು ನಡೆಯಿಸಲ್ಪಡುತ್ತಲಿದೆ.

ಈ ಕ್ಷೇತ್ರದಲ್ಲಿ ಧೂಳಿದರ್ಶನವು ಮುಖ್ಯವಾದುದು. ಬೆಟ್ಟಗಳನ್ನು ಹತ್ತಿ ಬಂದ ಯಾತ್ರಿಕರು ಕಾಲುಗಳನ್ನಾದರೂ ತೊಳೆಯದಂತೆ ಧೂಳಿಯಿಂದಿದ್ದ ಪಾದಗಳಿಂದಲೇ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ಗುಡಿಗೆ ಹೋಗಿ ಮೊಳ ಕಾಲೂರಿ ಶಿವಲಿಂಗದ ಶಿರೋಭಾಗವು ಹಣೆಗೆ ತಗಲುವಂತೆ ಸ್ಪರ್ಶಿಸಿ ಸಂತೃಪ್ತ ರಾಗುತ್ತಾರೆ. ಜಾತಿಚಕ್ಷಣೆಯಿಲ್ಲದೆ ಬಂದವರೆಲ್ಲರೂ ಇಲ್ಲಿಯ ಶ್ರೀ ಮಲ್ಲಿಕಾರ್ಜುನ ಲಿಂಗವನ್ನು ಸ್ಪರ್ಶಮಾಡಬಹುದು. ಭಕ್ತಪರಾಧೀನನಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಯು ಸರ್ವಸುಲಭವೆಂದೀ ಮೂಲಕ ಪ್ರತ್ಯಕ್ಷವಾಗಿ ತಿಳಿಯುವದಿಲ್ಲವೇ ?

ಶಿವರಾತ್ರಿಗೆ ಬಂದ ಭಕ್ತರು ಧೂಳಿದರ್ಶನಾನಂತರ ಗುಡಿಗೆ ಮೈಲುದೂರ ದಲ್ಲಿರುವ ಪಾತಾಳಗಂಗೆಗೆ ತೊಂಬತ್ತುನೂರು ಸೋಪಾನಗಳು ಇಳಿದುಹೋಗಿ ಸ್ನಾನಾದಿಗಳನ್ನು ನಿರ್ವಹಿಸಿಕೊಂಡು ಆ ಜಲದಿಂದ ಲಿಂಗಾಭಿಷೇಕ ಮಾಡುತ್ತಾರೆ. ಹೀಗೆ ಅಭಿಷೇಕ ಮಾಡಿದನಂತರವೇ ಯಾತ್ರಿಕರ ಯಾತ್ರೆ ಪೂರ್ತಿಯಾಗುವದಂತೆ !

ಇಲ್ಲಿಯವರೆಗೂ (ಅಂದರೆ) ಬಸ್ಸುಗಳ ಓಡಾಟ ಪ್ರಾರಂಭವಾಗುವ ವರೆಗೂ ಯಾತ್ರಿಕರಿಗೆ ಮಹತ್ತರವಾದ ಕಷ್ಟಯಾತ್ರೆಯೆಂದು ಪ್ರಸಿದ್ಧವಾಗಿದ್ದುದರಿಂದಲೂ, ತಕ್ಕ ಸೌಕರ್ಯಗಳಿಲ್ಲದಿದ್ದುದರಿಂದಲೂ ಉತ್ಸವ ಸಮಯದಲ್ಲಿ ಮಾತ್ರ ಹೋಗುವದು, ಬರುವದು ನಡೆಯುತ್ತಿದ್ದಿತು. ಈಗ ಅತಿಶಯವಾದ ಸೌಖ್ಯಪ್ರಯಾಣಕ್ಕನುಕೂಲವಾಗಿರುವದರಿಂದ ಪ್ರತಿನಿತ್ಯದಲ್ಲಿಯೂ ಯಾತ್ರಿಕರು ಸ್ವಾಮಿದರ್ಶನಕ್ಕೆ ಹೋಗಿ ಧನ್ಯರಾಗಬಹುದಾಗಿದೆ. ಅನೇಕಾನೇಕ ಯುಗಗಳಿಂದ ಶ್ರೀಶೈಲವೆಂದರೆ ಸರ್ವಸಾಮಾನ್ಯರಿಗೆ ಹೃದಯ ತಲ್ಲಣಿಸಬಹುದಾಗಿದ್ದಿತು. ಆ ಮಲ್ಲಿಕಾರ್ಜುನನೇ ಆಂಧ್ರ ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ನೀಲಂ ಸಂಜೀವರೆಡ್ಡಿಯವರ ಹೃದಯದಲ್ಲಿ ಹೊಕ್ಕು ಈ ಇಪ್ಪತ್ತೆಂಟನೆಯ ಕಲಿಯುಗದಲ್ಲಿ ಶ್ರೀಶೈಲಕ್ಕೆ ರಾಜಮಾರ್ಗವನ್ನು ಕಲ್ಪಿಸುವದೆಂದರೆ ಅವರ

ಕೃತಾರ್ಥತೆಯು ಗಣಿಸಲಸದಳವಾಗಿರುವದು. ಭೂಲೋಕ ಕೈಲಾಸವೆನಿಸಿ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾಗಿ ಭರತಖಂಡದಲ್ಲೆಲ್ಲವೂ ಸುಪ್ರಸಿದ್ಧ ಕ್ಷೇತ್ರವೆಂದು ಪೆಸರ್ಗೊಂಡಿರುವ ಈ ಕ್ಷೇತ್ರವು ಕ್ರಮಕ್ರಮವಾಗಿ ಹಲವು ಸದುಪಾಯಗಳೀ ಪ್ರಜಾರಾಜ್ಯದಲ್ಲಿವುಂಟಾಗಿ, ಸಂದರ್ಶಿಸಿದ ಆ ಬಾಲಗೋಪಾಲ ಕ್ಕೆಲ್ಲವೂ ಅವರವರ ಹೃದಯದ ಲೀಲೆಯಂತೆ ಸಾಲೋಕ್ಯ ಸಾಮೀಪ್ಯ, ಸಾರೂಪ್ಯ, ಸಾಯುಜ್ಯಪದವಿಗಳುಂಟಾಗುವುದರಲ್ಲಿ ಸಂದೇಹವಿಲ್ಲವೆಂದು ಲೇಖಕ ನಾದ ನಾನು ಡಣಾಡಂಗುರವಾಗಿ ಸಾರುತ್ತಿರುವೆನು.

‡‡‡‡

## ಶ್ರೀಶೈಲ ಯಾತ್ರಾ ಮಾರ್ಗ ಸೌಕರ್ಯ ವಿಶೇಷಗಳು

ಶ್ರೀ ಕೇದಾರ, ಕಾಶಿ-ರಾಮೇಶ್ವರ ಮುಂತಾದ ಪುಣ್ಯಕ್ಷೇತ್ರಗಳು ದೂರದಲ್ಲಿರುವದರಿಂದ ಯಾತ್ರಿಕರಿಗೆ ಯೆಷ್ಟು ಕಷ್ಟವಾಗಿದ್ದಿತೋ, ಸಮೀಪ ಲ್ಲಿದ್ದರೂ ಆಂಧ್ರ ಕರ್ನಾಟಕ ದೇಶದ ಭಕ್ತಸಮುದಾಯಕ್ಕೆ ಅಷ್ಟು ಕಷ್ಟವಾಗಿ ದ್ದಿತು. ೧೯೪೭ ನೇ ಆಗಷ್ಟ ೧೫ ನೇ ತಾರೀಖಿನಿಂದ ಪ್ರಾರಂಭವಾದ ಭರತ ಖಂಡದ ಸ್ವರಾಜ್ಯವು ಧರ್ಮಾದಾಯ, ದೇವಾದಾಯ ಶಾಖೆಗಳನ್ನು ಪ್ರಭು ತ್ವವು ತನ್ನ ಯಾಜಮಾನ್ಯದಲ್ಲಿ ನಡೆಯಿಸಲು ಕಂಕಣತೊಟ್ಟಬಳಿಕ ಕ್ಷೇತ್ರಗಳು ಅಭಿವೃದ್ಧಿಗೆ ಬರಲನುಕೂಲವಾಯಿತೆಂತಲು ಇನ್ನೂ ಅನೇಕ ಪುಣ್ಯಕ್ಷೇತ್ರಗಳು ಆಯಾ ಕ್ಷೇತ್ರಗಳಲ್ಲಿರುವ ಪ್ರಾಚೀನ ನಿರ್ಮಾಣಗಳು ಜೀರ್ಣೋದ್ಧಾರಗಳು ಕಾಲಕಳೆದಂತೆಲ್ಲವೂ ಹೈಂದವ ಸ್ವಾತಂತ್ರ್ಯವಿರುವದರಿಂದ ಅತ್ಯುಚ್ಛ್ರಾಯ ಸ್ಥಿತಿಗೆ ಬರಲವಕಾಶವಿರುವದು. ಭರತಖಂಡದಲ್ಲಿ ಆಸ್ತಿಕತ್ವವು ಬೆಳೆಯಬೇಕು. ಪರಸ್ಪರ ದ್ವೇಷಾಸೂಯೆಗಳು, ಕುಲಜಾತಿ ವೈಷಮ್ಯಗಳು ನಿರ್ಮೂಲವಾಗ ಬೇಕು. ಶ್ರೀ ತಿರುಪತಿ ವೆಂಕಟೇಶ್ವರ ಕ್ಷೇತ್ರದಲ್ಲಿ ಸ್ಥಾಪಿತವಾದಂತೆ ವಿಶ್ವ ವಿದ್ಯಾಲಯಗಳೂ, ವಿದ್ಯಾರ್ಥಿಗಳಿಗನುಕೂಲವಾದ ನಿವಾಸಗಳೂ, ಭರತಖಂಡ ದಲ್ಲಿರುವ ಸಮಸ್ತ ಭಾಷೆಗಳಿಗೂ ಮಾತೃಸ್ವರೂಪಿಯಾಗಿರುವ ಸಂಸ್ಕೃತಭಾಷಾ ಬೋಧನಾಲಯಗಳೂ, ನವನವೀನವಾದ ವೈಜ್ಞಾನಿಕ ಮಂದಿರಗಳೂ ಯಾತ್ರಿಕರಿಗನುಕೂಲವಾದ ಸುಂದರ ಮಂದಿರಗಳೂ, ಪ್ರಾರ್ಥನಾಲಯಗಳೂ,

ಉಪನ್ಯಾಸ ಪೀಠಗಳೂ, ಆಯಾ ಪೀಠಗಳಲ್ಲಿ ಶಾಂತರೂ, ಬ್ರಹ್ಮವೇತ್ತರೂ, ಯೋಗಸಿಷ್ಠಾಗರಿಷ್ಠರೂ, ದೀನದಯಾಳುಗಳಾಗಿ ಮಾನವ ಶಬ್ದವನ್ನು ಸಾರ್ಥಕ ಮಾಡಿಕೊಳ್ಳಲಿಚ್ಛಿಸುವ ಜೀತೇಂದ್ರಿಯರೂ, ವಿದ್ಯಾರ್ಥಿಗಳ ಹೃದಯ ಪಲಕ ದಲ್ಲಿ ಆಸ್ತಿಕತೆಯ ಬೀಜವನ್ನು ನಾಂಟಿ, ವಟವೃಕ್ಷವಾಗುವಂತೆ ಮಾಡುವ ಮಹಾ ಮಹೋಪಾಧ್ಯಾಯರೂ, ಪುರುಷರಂತೆ ಮಹಿಳಾ ಲೋಕವನ್ನು ಉಚ್ಛ್ರಾಯ ಸ್ಥಿತಿಗೆ ತರಲು ಈಗಲು ಶತಾಯುಷಿಗಳಾಗಿ ಜೀವಿಸಿರುವ ಪ್ರೊಫೆಸರ್ ಕರ್ವೇ ಯವರಂತೆ ದುಡಿಯಲು ಬದ್ಧಕಂಕಣರಾಗುವಂಥ ಮಹಾತ್ಮರು ಹೆಚ್ಚಿ ಭಾರತ ದೇಶವನ್ನೇ ಅಪರ ಕೈಲಾಸ, ಅಪರ ವೈಕುಂಠವೆನ್ನುವಂತೆ ಮಾಡುವ ಮಹರ್ಷಿ ಗಳೂ ಜನ್ಮಿಸಿದರೆ, ವಿಂಧ್ಯ ಹಿಮವತ್ಪರ್ವತಗಳ ಮಧ್ಯದಲ್ಲಿರುವ ಆರ್ಯಾ ವರ್ತನಾಮಕ ಪುಣ್ಯಭೂಮಿಯು ಉತ್ತಮೋತ್ತಮ ನಾಗರೀಕತೆಯಭೂಖಂಡ ವೆನ್ನಿಸಿಕೊಳ್ಳುವುದೇನಾಶ್ಚರ್ಯ ?

ಮಹಾಕ್ಷೇತ್ರಗಳ ಪ್ರಖ್ಯಾತಿಯು ಪ್ರಜೆಗಳ ಸೌಕರ್ಯ ಹೆಚ್ಚಾಗುತ್ತ ಹೋದಂತೆಲ್ಲವು ಚಂದ್ರನ ಬೆಳ್ದಿಂಗಳಿನಂತೆ ಹಲವು ದಿಕ್ಕುಗಳಲ್ಲಿ ಹಬ್ಬಿ ಹರ್ಷಾ ತಿರೇಕದ ಸೌಲಭ್ಯವು ನೂರಾರು ಭಾಗ ಬೆಳೆಯುತ್ತದೆ. ಅಂತಹ ಸ್ಥಿತಿಗೆ ಬಂದರೆ ಪ್ರಜಾರಾಜ್ಯವೆಂಬ ಹೆಸರಿಗೆ ಸಾರ್ಥಕತೆವುಂಟಾಗುತ್ತದೆ.

ಪ್ರಥಮ ಪಂಚವರ್ಷ ಪ್ರಣಾಳಿಕೆ, ದ್ವಿತೀಯ ಪಂಚವರ್ಷ ಪ್ರಣಾಳಿಕೆ ಗಳಿಂದ ಭರತಖಂಡವು ಈಗೀಗ ಚೇತರಿಸಿಕೊಳ್ಳಲು ಪ್ರಾರಂಭವಾಗಿರುವದು. ಹೀಗೆ ಬಾಲ್ಯಾವಸ್ಥೆಯಲ್ಲಿರುವ ಭರತಖಂಡವು ಭೂಕೈಲಾಸವೆನ್ನಿಸಬೇಕಾದರೆ ಅತ್ಯಂತ ಸಾಹಸವಾದ ಕಾರ್ಯಗಳು ನಡೆದ ಶ್ರೀ ಶಿವಶರಣರ ಮಹಾತ್ಮರ, ಮಹರ್ಷಿಗಳ ಚರಿತ್ರೆಗಳು ಓದುಗರ ಜಿಹ್ವಾಗ್ರದಲ್ಲಿ ಭಕ್ತಿಪೂರ್ವಕವಾಗಿ ಹೀಗೆ ನರ್ತಿಸುವಂತಾಗಬೇಕು. ಪ್ರಪಂಚದಲ್ಲಿ ತಲೆಯೆತ್ತಿ ನಿಂತಿರುವ ಅಮೇರಿಕಾ, ರಷ್ಯಾ ಮುಂತಾದ ಭೂಖಂಡಗಳು ಒಂದೊಂದು ವಿಧವಾಗಿ ಬೆಳಕಿಗೆ ಬಂದಿರು ವಂತೆ, ಭರತಖಂಡವು ನಮ್ಮ ಮನುಮುನಿಗಳು ನಾಟಿದ ಆಸ್ತಿಕ ಪರಂಪರೆ ಯನ್ನು ಕಳೆಯದೆ, ನಾಸ್ತಿಕ ಬೀಜದ ಸುಳಿವನ್ನೆಲ್ಲೆಲ್ಲಿಯು ಕಾಣದಂತೆ ಮಾಡಿದರೆ, ಆಗ ಭರತಖಂಡದ ಜ್ಯೋತಿಯು ಪ್ರಚಂಡ ಭಾಸ್ಕರನಂತೆ ಪ್ರಕಾ ಶಿಸಲಾರದೇ ? ಅಂತಹ ರಾಮರಾಜ್ಯವು ಸುಸ್ಥಿರವಾಗಿ ನೆಲೆಗೊಂಡಲ್ಲಿ ಪ್ರಪಂಚ

ಕ್ಕೆಲ್ಲವು ಪ್ರಧಾನಾದರ್ಶವಾಗಿ ಹೊಳೆಯಲಾರದೇ ? ಪರಮಾತ್ಮನು ಭಕ್ತರು ಶಿವಘೋಯೆಂದು ಕೈಯೆತ್ತಿ ಘೋಷಿಸಿದಾಗ ಓ ಓ ಯೆಂದು ಪ್ರತಿಧ್ವನಿ ಕೊಡಲಾರನೇ ?

ಇಂತಹ ಸುರಾಜ್ಯವು ಪ್ರಜಾಪಾಲನಾಪ್ರಮುಖರು ತಂತಮ್ಮಲ್ಲಿಯ ರಾಗದ್ವೇಷಗಳನ್ನು ತೊರೆದು ನಿರಹಂಕಾರ, ನಿರ್ಮತ್ಸರ, ನಿಜವೈರಾಗ್ಯಗಳಿಂದ ಸ್ಥಿತಪ್ರಜ್ಞರಾಗಿ ನಿಂತದಿನವೇ ಅಖಂಡವಾದ ಸುದಿನವೆಂದು ಸಿಂಹಧ್ವಜವನ್ನು ಸ್ಥಾಪಿಸಲಾಗದೇ ? ಅಂತಹ ಕಾಲವೂ ಬರುತ್ತದೆ. ಎಲ್ಲೆಲ್ಲಿಯೂ ಸುಖ ಶಾಂತಿಗಳು ನೆಲೆಗೊಳ್ಳುತ್ತಿವೆ. ನಿಜವಾದ ಪ್ರಜಾರಾಜ್ಯವೆಂಬ ಹೆಸರು ಚತುರ್ದಿಕ್ಕುಗಳಲ್ಲಿಯೂ ತನ್ನಷ್ಟಕ್ಕೆತಾನೇ ಭೋರ್ಗರೆಯುವಂತಾಗುತ್ತಿದೆ. ಪುನಃ ಕೃತಯುಗ ಧರ್ಮಗಳೂ ತಲೆಯೆತ್ತುತ್ತಿವೆ ! ಅಷ್ಟಸಿದ್ಧಿಗಳುಳ್ಳ ಮಹನೀಯರು ಅನವರತವೂ ಪ್ರಜಾಸಂತತಿಗೆ ಅಖಿಲೈಶ್ವರ್ಯಗಳನ್ನು ಕೊಡುವವರಾಗುತ್ತಾರೆ. ದುರ್ಮಾರ್ಗವೂ, ಕುಹಕ ಕುಚೋದ್ಯಗಳೂ, ಪರಹಿಂಸೆ, ಕಾಠಿನ್ಯ ಬುದ್ಧಿ, ನಿರ್ದಯ, ನಿಂದನೆಗಳೂ, ಅನೀತಿವರ್ತನೆಗಳೂ, ಅವಿವೇಕಗಳೂ ಮಾಯವಾಗುತ್ತವೆ. ಧರ್ಮರಾಜನಂತಹ ಧಾರ್ಮಿಕ ಪುರುಷರೂ, ಭೀಮನಂಥ ಬಲಶಾಲಿಗಳೂ, ಅರ್ಜುನನಂಥಾ ಚಿತ್ರವಿಚಿತ್ರ ವಿದ್ಯಾವಿವೇಕ ಸಂಪನ್ನರೂ ನಕುಲ-ಸಹದೇವರಂಥಾ ಸ ಕ ಲ ಸುಗುಣಮಣಿವಿಭೂಷಿತರೂ, ಹೆಚ್ಚಾಗಿ ಜನಿಸಿ, ಭರತಖಂಡವು ಪಾರಮಾರ್ಥಿಕ ಪ್ರಭೆಯಿಂದ ಪರಿಶೋಭಿಸುವಂತಾಗತ್ತಿದೆ. ಹಾಗಾಗಲಿಕ್ಕೇಬೇಕು ಹಾಗಾಗದಿದ್ದರೆ ಪುಣ್ಯಕ್ಷೇತ್ರಗಳುಳಿಯುವವೇ ? ಸಾಧುಸಂತರಿಗೆ ಉಳಿಗಾಲವಿರುವದೇ ! ಸೀತಾ, ಅನಸೂಯಾ, ಅರುಂಧತಿಯರಂಥಾ ದಿವ್ಯ ಮಹಿಳಾರತ್ನಗಳು ಭರತಖಂಡದಲ್ಲಿ ಪುನಃ ಅವತರಿಸದಿದ್ದರೆ ಸ್ತ್ರೀಲೋಕಕ್ಕೆ ಗೌರವವು ಶಾಶ್ವತವಾಗುವದೇ ! ಮಹಾಪ್ರಭೋ ? ಶ್ರೀಶೈಲೇಶಾ ? ನಿನ್ನ ಕರುಣಾಕಟಾಕ್ಷವೀಕ್ಷಣದಿಂದ ಸಮಸ್ತ ಸನ್ಮಂಗಲಗಳೂ ಭಾರತಭೂಮಿಯಲ್ಲುಂಟಾಗಲಿ !

## ಪ್ರಕೃತದಲ್ಲಿರುವ ಮತ್ತು ಮಾಡಬೇಕಾದ ಸೌಕರ್ಯಗಳು

ಪ್ರಾಚೀನ ಕಾಲದಲ್ಲಿ ಪ್ರಸಿದ್ಧವಾಗಿದ್ದ ಮಠಗಳೆಲ್ಲವೂ ಪುನರುಜ್ಜೀವನ

ವಾಗುವದಕ್ಕೆ ಪ್ರಯತ್ನಗಳು ನಡೆಯುತ್ತಲಿರುವವು. ಪ್ರಭುತ್ವದವರು ಭಕ್ತಿಪೂರ್ವಕವಾಗಿ ಶ್ರೀಶೈಲದಲ್ಲಿ ಭವನಗಳನ್ನು ನಿರ್ಮಿಸುವದಕ್ಕೆ ಸಹಾಯಮಾಡಿ ಅವರ ಹೆಸರುಗಳನ್ನು ಭವನದ ಮುಂದೆ ಕೆತ್ತಿಸುತ್ತಿರುವರು. ಪ್ರಭುತ್ವದವರು ಸಹಾ ಅನೇಕ ಭವನಗಳನ್ನು, ರಸ್ತೆಗಳನ್ನು. ಪ್ರಜೋಪಯೋಗವಾಗುವಂತೆಯೂ ನವನಾಗರಿಕ ಕಾಲಕ್ಕೆ ಅನುಕೂಲವಾಗುವಂತೆಯೂ, ಆರೋಗ್ಯವಾಗಿರುವ ನೀರು ಲಭಿಸುವಂತೆಯೂ, ಆಯಾ ಭವನದಲ್ಲಿ ಗಾಳಿಯು ಬರುವುದಕ್ಕು ಹೋಗುವುದಕ್ಕು ಅನುಕೂಲವಾಗಿರುವಂತೆ ಕಿಟಕಿಗಳನ್ನು ಮೇಲ್ಭಾಗದ ಗವಾಕ್ಷಗಳನ್ನು ಹಚ್ಚುತ್ತಿರುವರು. ನಾನು ಹಿಂದೆ ಹೇಳಿದಂತೆ ಯಿಂತಹ ಪವಿತ್ರ ಕ್ಷೇತ್ರಗಳು ಆಧುನಿಕ ಪದ್ಧತಿಗಳಿಗನುಕೂಲವಾಗುವಂತೆ ಮಾಡುವುದಕ್ಕು ಪ್ರಪ್ರಥಮದಲ್ಲಿ ಪ್ರಾಚೀನ ಅರ್ವಾಚೀನ ಸೌಕರ್ಯಗಳು ಯರಡೂ ನಡೆಯುವಂತೆ ವಿದ್ಯಾಮಂದಿರಗಳೂ ಸ್ಥಾಪನೆಯಾಗಬೇಕು. ಚಿಕಿತ್ಸಾಮಂದಿರಗಳು ಹುಟ್ಟಬೇಕು. ನಿರ್ಮಲೋದಕವು ಕ್ಷೇತ್ರಗಳಲ್ಲಿ ಯೆಲ್ಲೆಲ್ಲಿಯೂ ಲಭಿಸುವಂತಾಗಬೇಕು. ಧರ್ಮಕರ್ತರು, ಅರ್ಚಕರು ಸ್ವಾರ್ಥತ್ಯಾಗ ಬುದ್ಧಿಯಿಂದ ತಂತಮ್ಮ ಕಾರ್ಯಗಳನ್ನು ನಿರ್ವಂಚನೆಯಿಂದ ನಡೆಯಿಸುತ್ತಾ ಪ್ರಜೆಗಳ ಮತ್ತು ಭಕ್ತರ ಆದರಣೆಯನ್ನು ಹೊಂದಬೇಕು. ಅಲ್ಲಲ್ಲಿ ಉದ್ಯಾನವನಗಳೂ, ಪುಷ್ಪವಾಟಿಕೆಗಳೂ, ಬಿಲ್ವ, ತುಳಸಿ ಗಿಡಗಳು ಕಣ್ಮನಗಳನ್ನಾಕರ್ಷಿಸುವಂತೆ ಯಿದ್ದು, ಸಂರಕ್ಷಕೋದ್ಯೋಗಿಗಳ ಮೇಲ್ವಿಚಾರಣೆಗೊಳಪಟ್ಟಿರಬೇಕು. ದೇವಾಲಯಗಳು ಒಂದು ವೇಳಾಪಟ್ಟಿಯನ್ನಿರಿಸಿಕೊಂಡು, ತ್ರಿಕಾಲಗಳಲ್ಲಿಯೂ, ಉತ್ಸವದಿವಸಗಳಲ್ಲಿಯೂ ಭಕ್ತರ ಉಲ್ಲಾಸಕ್ಕು, ಭಕ್ತರ ಮನೋರಥಕ್ಕು ಕುಂದುಕೊರತೆಗಳು ಸಂಭವಿಸದಂತೆ ಜಾಗರೂಕರಾಗಿರಬೇಕು. ಪ್ರಭುತ್ವದವರಿಂದಲೂ, ಪ್ರಜಾನಾಯಕರಿಂದಲೂ, ಶ್ರೀಮಂತರಿಂದಲೂ, ದಾತೃಗಳಿಂದಲೂ ದೀನಾನಾಥರಿಗೂ, ಅಂಗವಿಕಲರಿಗೂ, ದಾಸೋಹಗಳೂ (ಅನ್ನಛತ್ರಗಳೂ) ಸ್ಥಾಪನೆಯಾಗಬೇಕು. ಇದಲ್ಲದೆ ಪೂರ್ವಜನ್ಮ ಕೃತಕರ್ಮದಿಂದ ನೇತ್ರವಿಹೀನರಾದವರಿಗೆ ಪಾಠಶಾಲೆಗಳನ್ನಿರಿಸಿ ಅವರಿಗೆ ತಕ್ಕ ವಿದ್ಯಾಭ್ಯಾಸ ಮಾಡಿಸಬೇಕು. ಪ್ರತಿನಿತ್ಯದಲ್ಲಿಯೂ ಕ್ಷೇತ್ರಸ್ವಾಮಿಯ ದರ್ಶನಕ್ಕೆ ಬರುವ, ಪೋಗುವ ಜನರು ವಿಶೇಷವಾಗುತ್ತಿರುವದರಿಂದ ಕ್ಷೇತ್ರಮಹಿಮೆಗಳನ್ನು, ಕ್ಷೇತ್ರದರ್ಶನದಿಂದಾಗುವ ಫಲಗಳನ್ನು ಯೆರಡು-ಮೂರು ಭಾಷೆಗಳಲ್ಲಿ ಸಂಗೀತ, ಸಾಹಿತ್ಯ,

ವಿದ್ಯಾವಿಶಾರದರಾದವರಿಂದ ಕೀರ್ತನೆಗಳೂ, ಉಪನ್ಯಾಸಗಳೂ ನಡೆಯುವಂತಾಗಬೇಕು. ಆಯಾ ಪಂಡಿತರ ಉದರಪೋಷಣೆಗಾಗಿ ಪ್ರಭುತ್ವದವರು ಯೋಗ್ಯತೆಗೆ ತಕ್ಕಂತೆ ಮಾಸಿಕ ವೇತನವನ್ನು ಏರ್ಪಡಿಸಬೇಕು. ಸಮಸ್ತ ಕಾರ್ಯಗಳ ಮೇಲ್ವಿಚಾರಕರು ಶ್ರೀ ಕ್ಷೇತ್ರ ಕಮಿಟಿಯನ್ನು ಸ್ಥಾಪಿಸಿ ತನ್ಮೂಲಕ ದೇವಸ್ಥಾನದ ಕಾರ್ಯಗಳೆಲ್ಲವೂ ಸಾಂಗವಾಗಿ ನಡೆಯುವಂತೆ ಸಾರ್ವತ್ರಿಕವಾಗಿ ಸ್ಥಾಪಿಸಬೇಕು.

‡ ‡ ‡ ‡

# ಧಾರ್ಮಿಕ ರಾಜ್ಯ

ಶ್ರೀಶೈಲವೇ ಮುಂತಾದ ಮಹಾಕ್ಷೇತ್ರಗಳು ಧಾರ್ಮಿಕ ರಾಜ್ಯಗಳೆಂದು ಭಾವಿಸಬೇಕು. ನ್ಯಾಯಾನ್ಯಾಯ ವಿಚಾರಣೆಗೆ ಪ್ರಭುತ್ವದವರ ಸನ್ನಿಧಿಗೆ ಹೋಗಿ ಪ್ರಭೃತಿಹಸ್ತರಾಗಿ ನಿಂತು ಹೇಗೆ ತಂತಮ್ಮ ಅಭಿಪ್ರಾಯಗಳನ್ನು ನಿವೇದಿಸಿಕೊಂಡು ನಾಯ್ಯಾಧಿಪತಿಗಳ ನಿರ್ಣಯಕ್ಕೆ ಹೇಗೆ ತಲೆಬಾಗುವರೋ ತದ್ವತ್ ಜಗಚ್ಚಾಲಕನಾದ ಪರಶಿವನ ಸನ್ನಿಧಿಯಲ್ಲಿ ತಮ್ಮ ಕಾವ್ಯಗಳನ್ನು, ತಮ್ಮ ಮನೋರಥಗಳನ್ನು ನಿವೇದಿಸಿಕೊಂಡು ಆ ಮಹಾನುಭಾವನನ್ನು ತ್ರಿಕರಣ ಶುದ್ಧಿಯಿಂದರ್ಚಿಸಿ, ಸೇವಾವಿಶೇಷದಿಂದ ಮಹಾದೇವನ ಮನವನ್ನೊಲಿಸಿ ಯಿಷ್ಟಾರ್ಥಸಿದ್ಧಿಯನ್ನು ಪಡೆದುಕೊಳ್ಳಬೇಕು.

ಇಂತಹ ಸ್ಥಳದಲ್ಲಿ ಕಳವು, ಸುಲಿಗೆ, ದರೋಡೆ, ಸುಳ್ಳು, ಕುಹಕ ಕುಚೇಷ್ಟೆಗಳೆಲ್ಲವೂ ಸುತರಾಂ ಯಿಲ್ಲದಂತಾಗಬೇಕು. ಯಾವಾಗಲೂ ನಿತ್ಯೋತ್ಸವ, ನಿತ್ಯಮಂಗಳಗಳಿಂದೊಡಗೂಡಿ ಪರಮಾತ್ಮನ ಧ್ಯಾನವು ದೇವಸ್ಥಾನದ ಪರಿಸರದಲ್ಲಿರುವವರೆಗಾದರೂ ನಿರ್ದುಷ್ಟವಾಗಿರಬೇಕು. ಕೆಲವು ಕ್ಷೇತ್ರಗಳಲ್ಲಿ ಯುವಕ, ಯುವತಿಯರ ಸಮ್ಮೇಲನಗಳೂ, ಚತುರ್ಮುಖೀಪರಾಯಣಗಳೂ, ಚಿಲ್ಲರೆ ಆಟಪಾಠಗಳೂ, ಹೊತ್ತು ಹೋಗುವದಿಲ್ಲೆಂದು ಜರುಗಿಸುತ್ತಾ ಪರಮಾತ್ಮನ ನಾಮಸ್ಮರಣೆಗೆ ದಿವ್ಯವಾದ ಸಂದರ್ಭ, ಸೌಕರ್ಯಗಳ ಸಂಪ್ರಾಪ್ತವಾಗಿರುವಲ್ಲಿ ಅಂತಹ ಪರಿಶುದ್ಧವಾದ ಸನ್ನಿವೇಶವನ್ನು, ಅಪರಿಶುದ್ಧವಾದ ಕ್ರೀಡಾ

ಮಂದಿರಗಳಾಗಿ ಉಪಯೋಗಿಸುವುದನ್ನು ತ್ಯಜಿಸಬೇಕು. ಪ್ರಭುತ್ವದವರಾದರು ಅವರವರಿಷ್ಟ, ಅವರವರ ಉಲ್ಲಾಸವೆಂದು ಅಲಕ್ಷಮಾಡದೆ ಬಂದ ಯಾತ್ರಿಕರೇನು ಮಾಡುತ್ತಿರುವರು, ಅವರ ಕಾರ್ಯಕ್ರಮವೆಂತಹ ರೀತಿಯಲ್ಲಿರುವದೆಂದು ಆಳವಾಗಿ ವಿಚಾರಿಸಬೇಕು. ದುರುದ್ಯೋಗ, ದುಷ್ಟವೃತ್ತಿಗಳು, ಪರಮಾತ್ಮನ ಸನ್ನಿಧಿಯಲ್ಲಿ ಸುತರಾಂ ನಡೆಯಲಾಗದೆಂದು ಶಾಂತವಾಗಿ ಉಪದೇಶಿಸಬೇಕು. ಅನೈತಿಕ ವೃತ್ತಿಗಳೆಡೆಯಿಲ್ಲದಂತೆ ಮಾಡುವದೇ ಶ್ರೀ ಕ್ಷೇತ್ರಗಳ ಮುಖ್ಯ ಧ್ಯೇಯವೆಂದು ಭೋಧಿಸಬೇಕು. ಧರ್ಮಪಾಲನೆಯೇ ಕ್ಷೇತ್ರಗಳಲ್ಲಿ ಸದಾಸಂತೋಷದಿಂದ ನಡೆದು ಸಾರ್ವಜನಿಕರು ಮಹಾನಂದದಿಂದ ಮಹಾದೇವನನ್ನು ಭಜಿಸುವದೇ ತಮ್ಮ ಕರ್ತವ್ಯವೆಂದು ಭಾವಿಸುವಂತಾಗಬೇಕು. "ಕೈಲಾಸದಲ್ಲಿ ಸಹಾ ಇಲಿಗಳ ಕಾಟ" ವೆಂಬುವಂತೆ ಸಾಲೋಕ್ಯ, ಸಾಮಿಪ್ಯ, ಸಾರೂಪ್ಯ, ಸಾಯುಜ್ಯಪದವಿಗಳಿಗವಕಾಶವಿರುವ ಸ್ಥಳಗಳು ಮದ್ಯದ ಅಂಗಡಿಗಳಿಂದಲೂ ದ್ಯೂತಮಂದಿರಗಳಿಂದಲೂ ಕೂಡಿಕೊಂಡವುಗಳನ್ನಾಗಿ ಮಾಡುವದು ಶತಶಃ ಖಂಡನೀಯವೆಂದರಿಯಬೇಕು.

ಸದ್ಯಃ ಶ್ರೀಶೈಲ ಕ್ಷೇತ್ರವು ಆಂಧ್ರರಾಜ್ಯದ ದೃಷಿಯಲ್ಲಿ ಸುಳಿಯುತ್ತಿದೆ. ಅನುಕೂಲವಾದ ಮೋಟಾರು ಮಾರ್ಗವನ್ನೇರ್ಪಡಿಸಿದೆ. ಇನ್ನೂ ಅನೇಕಾನೇಕ ಅನುಕೂಲಗಳನ್ನು ಮಾಡಿ ಶ್ರೀಕ್ಷೇತ್ರವನ್ನು ಸಹಸ್ರಮುಖಗಳಿಂದೂರ್ಜಿತ ಸ್ಥಿತಿಗೆ ತರಲು ನಾನಾ ಯೋಜನೆಗಳಗಳನ್ನು ಸಿದ್ಧಮಾಡಿಕೊಂಡಂತಿದೆ.

ಇದಕ್ಕೆ ಅನುಕೂಲವಾಗಿ ಪ್ರಾಚೀನರ ಪದ್ಧತಿಗಳೂ, ನವೀನ ಚರಿತ್ರೆಗನುಕೂಲವಾಗುವಂತೆ ಮಾಡಬೇಕು. ಸ್ಥಲ ಪುರಾಣದಿಂದಲೂ, ಚರಿತ್ರೆಗಳಿಂದಲೂ, ಸಾರ್ವಜನಿಕರ ರೂಢಿಮಾತುಗಳಿಂದಲೂ, ಪ್ರಭುತ್ವದವರ ರಿಪೋರ್ಟುಗಳಿಂದಲೂ ಚೀನಾ, ರಷ್ಯಾ, ಟಿಬೇಟ ದೇಶದಿಂದ ಪೂರ್ವಕಾಲಕ್ಕೆ ದೇಶಾಟನಕ್ಕೆ ಬಂದ ಪ್ರೌಢರಾದ ಯಾತ್ರಿಕರಿಂದಲೂ, ಯಾರ್‍ಯಾರ ಅಧಿಕಾರಗಳು ಶ್ರೀಶೈಲದಲ್ಲಿ ನಡೆಯುತ್ತಿದ್ದವೆಂದು ಬರೆಯಲ್ಪಟ್ಟಿರುವವೋ ಆ ವಾಕ್ಯಗಳಿಗನುಕೂಲವಾಗಿ ಸುಧಾರಣೆ ಪದ್ಧತಿಗಳಿಂದ ನಡೆಯುವಂತೆ ನಿರ್ವಂಚನೆಯಿಂದ ಏರ್ಪಡಿಸಬೇಕು.

# .... ಪ್ರಕೃತವಿರುವ ನಿವಾಸಮಂದಿರಗಳು ....

++++++++

ಯಾತ್ರಿಕರ ನಿವಾಸಕ್ಕಾಗಿ ಮೂರುತರಹದ ಭವನಗಳನ್ನು ನಿರ್ಮಿಸಲು ಪ್ರಭುತ್ವದವರು ಸಂಕಲ್ಪಮಾಡಿರುವರು. ಅವುಗಳಲ್ಲಿ ಕೆಲವು ಒಂದೇ ಕೋಣೆ ಯಿರುವ ಮನೆಗಳೂ, ಯರಡು ಕೋಣೆಗಳಿರುವ ಮನೆಗಳೂ, ಇನ್ನೂ ಕೆಲವು ಮೂರು ಕೋಣೆಗಳಿರುವ ಮನೆಗಳೂ, ಈ ಮನೆಗಳಲ್ಲಿ ಅಡಿಗೆಗೂ, ಸ್ನಾನಕ್ಕೂ ಪ್ರತ್ಯೇಕವಾದ ಸೌಕರ್ಯಗಳಿರುವವು. ಒಂದೇ ಕೋಣೆ ಯಿರುವ ಮನೆಗೆ ನಾಲ್ಕೈದುನೂರು ರೂಪಾಯಿಗಳು ಬೇಕಾಗುವವೆಂತಲೂ, ಯರಡು ಕೋಣೆ ಗಳಿರುವ ಮನೆಗೆ ಏಳುಸಾವಿರ ಬೇಕಾಗುವವೆಂತಲೂ, ಮೂರು ಕೋಣೆಗಳ ಮನೆಗೆ ಹತ್ತುಸಾವಿರ ಬೇಕಾಗುವವೆಂತಲೂ ಯೋಜನೆ ಮಾಡಿರುವರು. ಈ ನೂತನ ಭವನಗಳಿಗೆ ಪ್ರಭುತ್ವದವರು ನಾಲ್ಕರಲ್ಲಿ ಒಂದು ಭಾಗ ವಹಿಸಿಕೊಳ್ಳು ತ್ತಾರೆ. ಮಿಕ್ಕ ಮೂರು ಭಾಗಗಳು ನಿರ್ಮಿಸುವ ದಾತೃಗಳು ವಹಿಸಿಕೊಳ್ಳ ಬೇಕು. ದಾತೃಗಳ ಹೆಸರುಗಳು ಆಯಾ ಭವನದಮೇಲೆ ಕೆತ್ತಿಸಲ್ಪಡುತ್ತವೆ. ಮತ್ತು ಸಂವತ್ಸರಕ್ಕೆ ಹತ್ತುದಿನಗಳು ಭವನಸಹಾಯಕ (ಅರ್ಥಾತ್ ನಿರ್ಮಾ ಪಕರ) ರಿಗಾಗಲಿ ಅವರ ಅಪ್ಪಣೆಪಡೆದವರಿಗಾಗಲಿ ಆ ಭವನದಲ್ಲಿ ಉಚಿತ ಸೌಕರ್ಯಗಳು ಒದಗಿಸಿಕೊಡುತ್ತಾರೆ.

ಭವನದ ವಿಷಯದಲ್ಲಾಗಲಿ,ಭವನ ನಿರ್ಮಾಣಸ್ಥಳದ ವಿಷಯದಲ್ಲಾಗಲಿ ದಾತೃಗಳಿಗಾವ ವಿಷಯದಲ್ಲಿಯೂ ಹಕ್ಕು (ಅಧಿಕಾರ) ಯಿರುವದಿಲ್ಲ.

ಸದ್ಯಃ ಅದೇ ಸ್ಥಾನದ ಸ್ಥಾನಿಕಾಭಿವೃದ್ಧಿಯ ಪ್ರಣಾಳಿಕೆಯ ಪ್ರಕಾರ ಇಪ್ಪತ್ತುಸಾವಿರ ರೂಪಾಯಿಗಳ ಖರ್ಚಿನಿಂದ ಒಂದು ವಿಶ್ರಾಂತಿ ಭವನವು ನಿರ್ಮಿಸಲ್ಪಡುತ್ತದೆ ಮತ್ತು ಶ್ರೀ ಗಂಡಿನಾಗಯ್ಯ ಶ್ರೇಷ್ಠಿಯೆಂಬುವ ದಾತೃಗ ಳಿಂದ ಒಂದು ಭವನವು ನಿರ್ಮಾಣವಾಗುತ್ತಲಿದೆ. ಈ ಯರಡೂ ಭವನಗ ಗಳಿಗೂ ಆಂಧ್ರಪ್ರದೇಶದ ಮುಖ್ಯಮಂತ್ರಿಯವರಾವ ಶ್ರೀನೀಲಂಸಂಜೀವರೆಡ್ಡಿ ಯವರೇ ಶಂಕುಸ್ಥಾಪನೆ ಮಾಡಿದ್ದಾರೆ. ಮತ್ತು ಶ್ರೀ ಬಿ. ಜೋಗಪ್ಪನವರು,

ಶ್ರೀ ಕೆ. ಶ್ರೀನಿವಾಸರವರೂ, ಶ್ರೀ ಹರಿದಾಸರು ಕೊಟ್ಟ ದ್ರವ್ಯದಿಂದ ನಿರ್ಮಿಸ ಲ್ಪಡಲಿರುವ ಗ್ರಹಗಳಿಗೆ ಆ ದಿನವೇ ಅಂದರೆ ತಾ. ೨೪–೧೧–೫೭ ರಲ್ಲಿಯೇ ಮೈಸೂರ ರಾಜ್ಯದ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಶಂಕುಸ್ಥಾಪನೆ ಮಾಡಿದರು. ಶ್ರೀ ಮೇಡಾ ರಾಮಯ್ಯನವರು, ಶ್ರೀ ಮೇಡಾ ಸುಬ್ಬಯ್ಯನ ವರು ಕೊಟ್ಟ ದ್ರವ್ಯದಿಂದ ನಿರ್ಮಿಸಲ್ಪಡಲಿರುವ ಭವನಗಳಿಗೆ ಸ್ಥಾನಿಕಶಾಖಾ ಮಂತ್ರಿ ಶ್ರೀ ಕಾಸು ಬ್ರಹ್ಮಾನಂದರೆಡ್ಡಿಯವರು ಶ್ರೀ ನರಸಿಂಹಲು ಶ್ರೇಷ್ಠಿ ಯವರೂ ಕೊಟ್ಟ ದ್ರವ್ಯದಿಂದ ನಿರ್ಮಿಸಲ್ಪಡಲಿರುವ ಗೃಹಕ್ಕೆ ಆಗಿನ ಆಂಧ್ರ ಪ್ರದೇಶದ ಕಾಂಗ್ರೆಸು ಅಧ್ಯಕ್ಷರು ಶ್ರೀ ಅಲ್ಲೂರಿ ಸತ್ಯನಾರಾಯಣರವರೂ, ಶ್ರೀ ಗುರವಿರೆಡ್ಡಿ ಶ್ರೀರಾಮರೆಡ್ಡಿಯವರು ಕೊಟ್ಟ ದ್ರವ್ಯದಿಂದ ನಿರ್ಮಿಸಲ್ಪಡಲಿರುವ ಮನೆಗಳಿಗೆ ಯಿರ್ವರು ಮುಖ್ಯಮಂತ್ರಿಗಳೂ ಆ ದಿನವೇ ಶಂಕುಸ್ಥಾಪನೆ ಮಾಡಿದರು.

ಇದಲ್ಲದೆ ಶ್ರೀಶೈಲವು ಸಮುದ್ರದ ಮಟ್ಟಕ್ಕೆ ೧೫೦೦ ಅಡಿಗಳ ಯೆತ್ತರದ ಲ್ಲಿರುವುದರಿಂದ ಇಲ್ಲಿಯ ವಾತಾವರಣವು ತಂಪಾಗಿ ಆನಂದವನ್ನುಂಟು ಮಾಡುತ್ತದೆ. ಇಲ್ಲಿಗೆ ಹೋಗುವ ಮಾರ್ಗವು ಸುಂದರ ಪ್ರಕೃತಿರಮಣೀಯಕ ವಾಗಿರುವುದರಿಂದ ಯಾತ್ರಿಕರು ಮಾತ್ರವೇ ಅಲ್ಲದೆ ಇತರರೂ ಸಹಾ ಆ ಗಿರಿ ಯನ್ನು ನೋಡಲು ಕುತೂಹಲಚಿತ್ತರಾಗುತ್ತಾರೆ. ಇಂತಹ ಮನೋಹರ ಕ್ಷೇತ್ರದಲ್ಲಿ ಭವನಗಳನ್ನು ನಿರ್ಮಿಸಲು ದಾತೃಗಳಾದ ಮಹನೀಯರನೇಕರು ವಾಗ್ದಾನಮಾಡಿರುವಂತೆ. ಪ್ರಕೃತ ಸ್ಥಿತಿಯು ಹೀಗಿರುವುದರಿಂದ ಆ ಚಿರ ಕಾಲದಲ್ಲಿಯೇ ವಿಶ್ರಾಂತಿ ತೆಗೆದುಕೊಳ್ಳಲನುಕೂಲವಾಗಿ ಶ್ರೀಗಿರಿಯು ಸುಂದರ ಗಿರಿನಗರವಾಗಿ ಪ್ರಾಚೀನೌನ್ನತ್ಯವನ್ನು ಹೊಂದಬಹುದಾಗಿದೆಯೆಂದು ನಂಬ ಬಹುದಾಗಿದೆ. ಇಲ್ಲಿ ಐವತ್ತು ಸಾವಿರ ರೂಪಾಯಿಗಳು ವೆಚ್ಚಿಸಿ ಒಂದು ಸುಂದರವಾದ ಅತಿಥಿಗೃಹವನ್ನು ಭಾರತ ಪ್ರಭುತ್ವವು ನಿರ್ಮಿಸಲು ಯೋಜಿಸಿ ರುವದೆಂದು ತಿಳಿಯಬರುತ್ತದೆ.

ಒಂದು ಶ್ರೀಶೈಲದಲ್ಲಿ ಮಾತ್ರವೇ ಅಲ್ಲದೆ ಶ್ರೀಶೈಲಕ್ಕೆ ಹೋಗುವ ಮಾರ್ಗ ದಲ್ಲಿ ಸಹಾ ಯಾತ್ರಿಕರಿಗೆ ಹಲವು ಸೌಕರ್ಯಗಳುಳ್ಳ ಗೃಹಗಳನ್ನು ಕಟ್ಟಿಸುವ ವರಾಗಿರುವರು. ಕರ್ನೂಲು ಜಿಲ್ಲೆಯ ಆತ್ಮಕೂರಿನಲ್ಲಿ ಸೂರ್ಯಸಿಂಹಾಸನಾ

ಧಿಪತಿಗಳ ಪೀಠದ ಸಮೀಪದಲ್ಲಿ ವೀರಶೈವ ಸಂಘದವರು ಮೂವತ್ತು ಸಾವಿರ ರೂಪಾಯಿಗಳು ವೆಚ್ಚಿಸಿ ಯಾತ್ರಿಕರ ನಿವಾಸವೆಂಬ ಒಂದು ಸುಂದರ ಭವನ ವನ್ನು ನಿರ್ಮಿಸಿರುವರು. ಈ ಭವನವನ್ನು ಮೈಸೂರ ರಾಷ್ಟ್ರದ ಮುಖ್ಯ ಮಂತ್ರಿಗಳಾದ ಶ್ರೀ ನಿಜಲಿಂಗಪ್ಪನವರು ತಾವು ಶ್ರೀಶೈಲಕ್ಕೆ ಬಂದಿದ್ದ ಸಂದರ್ಭ ದಲ್ಲಿಯೇ ಬಹಿರ್ಗತಮಾಡಿದರು. ಈ ವೀರಶೈವ ಸಂಘದವರೇ ಶ್ರೀಶೈಲ ಕ್ಷೇತ್ರದಲ್ಲಿ ಲಕ್ಷರೂಪಾಯಿಗಳನ್ನು ಖರ್ಚುಮಾಡಿ ಒಂದು ಛತ್ರವನ್ನು ನಿರ್ಮಿ ಸಲು ಸಂಕಲ್ಪಿಸಿರುವರು. ಅವರೀ ವಿಷಯಕ್ಕಾಗಿ ಅನೇಕರಿಂದ ವಿಪುಲ ದ್ರವ್ಯ ವನ್ನು ಸಂಪಾದಿಸುತ್ತಲಿರುವರು.

ಇಲ್ಲಿಯವರೆಗೂ ಶ್ರೀಶೈಲ ಪರ್ವತದಲ್ಲಿ ಯಾವ ಪದಾರ್ಥಗಳು ಲಭಿಸ ದಂತಿದ್ದುದರಿಂದ ಪ್ರಜೆಗಳಿಗೆಲ್ಲರಿಗೂ ತುಂಬಾ ಕಷ್ಟವಾಗಿದ್ದಿತು. ಏಕಾಕಿ ಯಾಗಿ ಹೋಗುವವರು ಭೋಜನಕ್ಕಾಗಿ ತುಂಬಾ ಕಷ್ಟಪಡಬೇಕಾಗಿದ್ದಿತು. ಆದರೆ ಈಗ ಆ ಕಷ್ಟಗಳೆಲ್ಲವೂ ನಿವಾರಣೆಯಾಗಿರುವವು. ಅಡಿಗೆ ಮಾಡಿ ಕೊಳ್ಳುವವರಿಗೆ ಬೇಕಾದ ವಸ್ತುಗಳೂ ಬಿಕರಿಮಾಡುವುದಕ್ಕೊಂದು ವಸ್ತು ವಿಕ್ರಯಶಾಲೆಯ ಯೇರ್ಪಾಟಾಗಿರುವದು. ಕುಟುಂಬಸಮೇತವಾಗಿ ಬಂದವ ರಿಗೂ, ಒಬ್ಬಂಟಿಗರಾಗಿ ಬಂದವರಿಗೂ, ಅಡಿಗೆಮಾಡಿಕೊಳ್ಳಲಪೇಕ್ಷೆಯಿಲ್ಲದವ ರಿಗೂ ಸೌಕರ್ಯಕ್ಕಾಗಿ ಒಂದು ಭೋಜನ ಶಾಲೆಯು ನಡೆಯಿಸಲ್ಪಡುತ್ತಿರು ವದು. ಅಲ್ಲಿ ಕಾಫಿ, ಚಹಾ, ಫಲಹಾರಗಳೂ ಮತ್ತು ಊಟವು ಲಭಿಸುತ್ತಿರು ವವು. ಹನ್ನೆರಡಾಣೆಗೆ ಒಂದು ಉತ್ತಮವಾದ ಭೋಜನವು ಲಭಿಸುವ ಅವಕಾಶವನ್ನು ಒದಗಿಸಿಕೊಟ್ಟಿರುವರು.

ಮತ್ತು ಇಲ್ಲಿ ನಿವಾಸಮಾಡುವವರಿಗೂ, ಯಾತ್ರಿಕರಿಗೂ ಸೌಕರ್ಯ ಕ್ಕಾಗಿ ಈ ಮಧ್ಯದಲ್ಲಿಯೇ ಒಂದು ಪೋಸ್ಟಾಫೀಸು ಸ್ಥಾಪಿತವಾಗಿರುವದು. ಯಾವ ಕಾರಣದಿಂದಲಾದರೂ ಅಲ್ಲಿಗೆ ಬರಲಾರದ ಭಕ್ತರು ತಮ್ಮ ದೇವರ ಕಾಣಿಕೆಗಳನ್ನು ಸಮರ್ಪಿಸುವುದಕ್ಕು ತಾವು ಅಪೇಕ್ಷಿಸಿದ ಪೂಜೆಗಳು ನಡೆಯಿ ಸುವುದಕ್ಕು ಈ ಪೋಸ್ಟಾಫೀಸು ಹೆಚ್ಚು ಸೌಕರ್ಯವನ್ನುಂಟು ಮಾಡಿರುವದು.

ಹತ್ತು ವರ್ಷಗಳ ಕೆಳಗಿದ್ದ ಶ್ರೀಶೈಲ ಕ್ಷೇತ್ರಕ್ಕೂ, ಪ್ರಕೃತ ಕಂಡುಬರುವ ಕ್ಷೇತ್ರಕ್ಕೂ ಎಷ್ಟೋ ವ್ಯತ್ಯಾಸವಿರುವದು. ಆಗ ನಿರ್ಮಾನುಷ್ಯವಾಗಿದ್ದ ಪ್ರದೇ

ಶವು ಈಗ ಜನಸಂಚಾರವುಳ್ಳದ್ದಾಗಿ ಮಹತ್ತರ ಕಳಾಭರಿತವಾಗಿ ಕಾಣುತ್ತದೆ. ಶಿಥಿಲಗಳೆಲ್ಲವು ಸುಧಾರಣೆಗೊಳಪಟ್ಟಿರುತ್ತವೆ. ಆಂಧ್ರಪ್ರದೇಶದ ಪ್ರಭುತ್ವವು ಈ ಶ್ರೀಶೈಲದ ಅಭಿವೃದ್ಧಿಗಾಗಿ ಅನೇಕ ವಿಧವಾಗಿ ಕೃಷಿಮಾಡುತ್ತಿರುವದು. ಕೇಂದ್ರ ಪ್ರಭುತ್ವದವರೂ ಸಹಾ ಶ್ರೀಶೈಲ ನಗರ ನಿರ್ಮಾಣಕ್ಕಾಗಿ ದ್ರವ್ಯ ಸಹಾಯ ಮಾಡುತ್ತಲಿರುವರು. ಇತರ ರಾಷ್ಟ್ರಪ್ರಭುತ್ವದವರೂ ಸಹಾ ಸಾಧ್ಯ ವಾದಷ್ಟು ಸಹಾಯ ಮಾಡುತ್ತಲಿರುವರು. ಶ್ರೀಮಂತರಾದವರು ದೊಡ್ಡ ನಿಧಿ ಗಳನ್ನಿತ್ತು ತಮ್ಮ ಕೀರ್ತಿಯು ಸ್ಥಿರವಾಗಿರುವಂತಹ ಶಾಶ್ವತ ಪ್ರಜೋಪಯೋಗ ಕಾರ್ಯಗಳನ್ನು ಮಾಡುತ್ತಲಿರುವರು. ಇನ್ನು ಸದ್ಭಕ್ತರು ಸಹಾಯ ಮಾಡು ವುದಕ್ಕೆ ಕಂಕಣ ಕಟ್ಟಿಕೊಂಡರೆಂದರೆ ಶ್ರೀಶೈಲವು ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಅತ್ಯಂತ ತೇಜೋಭರಿತವಾದ ಪುಣ್ಯಕ್ಷೇತ್ರವಾಗುವುದಲ್ಲದೆ ಮಹಾನಗರವೆಂದು ಸುಪ್ರಸಿದ್ಧವಾಗುವದೆಂದು ದೃಢವಾಗಿ ನಂಬಲವಕಾಶವಿರುವದು.

## ಪೂಜಾವಿಧಿಗಳು



ಸಮಸ್ತ ಬ್ರಹ್ಮಾಂಡಚಾಲಕನು ಮಲ್ಲಿಕಾರ್ಜುನನು ಆದರೆ ಆ ಮಹಾ ಸ್ವಾಮಿಗೆ ಭಕ್ತರು ನಿವೇದಿಸಿದ ಕಾಣಿಕೆಗಳೇ ಹೊರತು ಮತ್ತೊಂದು ವಿಧವಾದ ಆದಾಯವಿಲ್ಲ ದೇವಸ್ಥಾನಕ್ಕೆ ಸಂಬಂಧಿಸಿದ ಭೂಮಿಗಳೆಲ್ಲ ಮಾನ್ಯದ ಹೊಲ ಗಳಿಲ್ಲ. ಯಾವ ವಿಧವಾದ ನಿಕರಾದಾಯವಿಲ್ಲ. ದರ್ಶನಾರ್ಥವಾಗಿ ಬಂದ ಭಕ್ತರಿತ್ತ ಕಾಣಿಕೆಗಳೇ ಒಂದು ವರ್ಷಕ್ಕೆ ಸಾಧಾರಣ ನಾಲ್ವತ್ತು ಸಹಸ್ರ ರೂ- ಪಾಯಿಗಳಾಗುವವು. ಈ ಮೊತ್ತದಿಂದ ದೇವಸ್ಥಾನದ ಖರ್ಚುಗಳೂ, ದೇವಾ ಲಯದ ಉದ್ಯೋಗಿಗಳ ವೇತನಗಳೂ, ದೇವಾಲಯದಲ್ಲಿ ಕೆಲಸ ಮಾಡುವದರ ಸಂಬಳಗಳು ಇವೆಲ್ಲವುಗಳ ವಿನಿಯೋಗಕ್ಕೆ ಮೇಲ್ಕಂಡ ಆದಾಯವು ಸಹಾ ಪೂರೈಕೆಯಾಗುವುದಿಲ್ಲ. ದೇವಾಲಯದ ಜೀರ್ಣೋದ್ಧಾರಕ್ಕೂ, ಮಹಾ ಮಹಾ ಭವನಗಳನ್ನು ನಿರ್ಮಿಸುವದಕ್ಕೂ, ಯಾತ್ರಿಕರಿಗೆ ಸೌಕರ್ಯವ ನ್ನುಂಟು ಮಾಡುವದಕ್ಕೂ ಲಕ್ಷಾಂತರ ಹಣವು ಬೇಕಾಗುತ್ತದೆ. ಇಂತಹ

ಕಾರ್ಯಗಳಿಗೆಲ್ಲವೂ ದೇಶದ ಭಕ್ತರು, ಭಕ್ತರನ್ನು ಪ್ರೋತ್ಸಾಹಿಸುವ ಪ್ರಭುತ್ವದವರು ಮಹಾ ತ್ಯಾಗಬುದ್ಧಿಯಿಂದ ಶ್ರೀ ಮಲ್ಲಿಕಾರ್ಜುನನನ್ನು ಶ್ರೀಗಿರಿನಗರ ದೊಡೆಯನನ್ನು ನೋಡಲೆಳಿಸಿದರೆ ಆ ಚಿರಕಾಲದಲ್ಲಿಯೇ ಸರ್ವಸೌಭಾಗ್ಯ ಸಮೇತ ಶ್ರೀಶೈಲ ಪಟ್ಟಣವು ಸಮಸ್ತ ನಗರಗಳಿಗೆ ಮುಕುಟಮಣಿಯಾಗಿ ಬೆಳಗುವದೆಂದು ಶ್ರೀಮಲ್ಲಿಕಾರ್ಜುನನ ಪ್ರೇರಣೆಯಿಂದ ಬರೆಯಲಾನಂದವಾಗುತ್ತದೆ.

ಪ್ರಕೃತದಲ್ಲಿ ಶ್ರೀ ದೇವಾಲಯ ಕಮಿಟಿಯವರು ಪೂಜಾಕೈಂಕರ್ಯಾದಿಗಳಿಗೆ ಈ ಕೆಳಗೆ ಕಾಣಿಸಿದ ನಿಯಮಗಳನ್ನು ವಿಧಿಸಿರುವರು.

| | | ರೂ. ಪೈಸೆ |
|---|---|---|
| ೧. | ದೇವಾಲಯ ಪ್ರವೇಶಕ್ಕೆ ಮತ್ತು ದರ್ಶನಕ್ಕೆ | ೧—೦೦ |
| ೨. | ಕರ್ಪುರಾರತಿಗೆ ಮತ್ತು ತೆಂಗಿನಕಾಯಿ ಒಡೆಯುವದಕ್ಕೆ ಮತ್ತು ಬತ್ತಿಗಳು ಬೆಳಗಿಸುವದಕ್ಕೆ | ೦—೫೦ |
| ೩. | ಮಹಾನ್ಯಾಸಪೂರ್ವಕ, ಕಾಠಕ, ಶತಾನುವಾಕ ಸಹಿತ ಅತಿರುದ್ರಾಭಿಷೇಕ ೧೩೩೧ ಆವರ್ತಿಗಳಿಗೆ | ೧೧೧೬—೦೦ |
| ೪. | ಮಹಾನ್ಯಾಸಪೂರ್ವಕ, ಕಾಠಕ, ಶತಾನುವಾಕ ಸಹಿತ ಮಹಾರುದ್ರಾಭಿಷೇಕ ೧೨೧ ಆವರ್ತಿಗಳಿಗೆ | ೨೫೦—೦೦ |
| ೫. | ಮಹಾನ್ಯಾಸಪೂರ್ವಕ ಕಾಠಕ, ಶತಾನುವಾಕ ಸಹಿತ ರುದ್ರಾಭಿಷೇಕ ೧೧ ಆವರ್ತಿಗಳಿಗೆ | ೧೧೬—೦೦ |
| ೬. | ಮಹಾನ್ಯಾಸಪೂರ್ವಕ ಕಾಠಕ, ಶತಾನುವಾಕ ಸಕೃದ್ವಾರಾಭಿಷೇಕಕ್ಕೆ ಏಕಾವರ್ತಿಗೆ | ೫೦ - ೦೦ |
| ೭ | ಮಹಾನ್ಯಾಸಪೂರ್ವಕ ಮಹಾರುದ್ರಾಭಿಷೇಕಕ್ಕೆ ೧೧ ಆವರ್ತಿಗಳಿಗೆ | ೫೦—೦೦ |
| ೮. | ಮಹಾನ್ಯಾಸಪೂರ್ವಕ ರುದ್ರಾಭಿಷೇಕ ೧೧ ಆವರ್ತಿಗಳಿಗೆ | ೩೦—೦೦ |
| ೯. | ಮಹಾನ್ಯಾಸಪೂರ್ವಕ ಸಕೃದ್ವಾರಾಭಿಷೇಕ ಏಕಾವರ್ತಿಗೆ | ೧೫—೦೦ |
| ೧೦ | ಲಘುನ್ಯಾಸಪೂರ್ವಕ ರುದ್ರಾಭಿಷೇಕ ಏಕಾವರ್ತಿಗೆ | ೨೦—೦೦ |
| ೧೧. | ಲಘುನ್ಯಾಸಪೂರ್ವಕ ಸಕೃದ್ವಾರಾಭಿಷೇಕ ಏಕಾವರ್ತಿಗೆ | ೧೨—೦೦ |

೧೨. ರುದ್ರಾಭಿಷೇಕ ೧೧ ಆವರ್ತಿಗೆ ೨೦ ೦೦

೧೩. ಸಕೃದ್ರಾವ್ವರಾಭಿಷೇಕ ಏಕಾವರ್ತಿಗೆ ೯೦—೦೦

೧೪. ಪುರುಷ ಸೂಕ್ತವಿಧಾನದಿಂದ ಶಿವಸಹಸ್ರನಾಮ ಪೂಜೆಗೆ ೧೨—೦೦

೧೫. ಶಿವಸಹಸ್ರನಾಮ ಪೂಜೆಗೆ ೧೮ ೦೦

೧೬. ಭೃಂಗಿಪೂಜೆಗೆ ೫—೦೦

೧೭. ಪುರುಷ ಸೂಕ್ತವಿಧಾನದಿಂದ ತ್ರಿಶತಿಪೂಜೆಗೆ ೩—೦೦

೧೮. ತ್ರಿಶತಿಪೂಜೆಗೆ ೩—೦೦

೧೯. ಪುರುಷ ಸೂಕ್ತವಿಧಾನದಿಂದ ಶಿವಾಷ್ಟೋತ್ತರ ಶತನಾಮಪೂಜೆಗೆ ೬—೦೦

೨೦. ಶಿವಾಷ್ಟೋತ್ತರ ಶತನಾಮಪೂಜೆಗೆ ೪—೦೦

೨೧. ಲಕ್ಷ ಬಿಲ್ವಾರ್ಚನೆಗಾಗಲಿ, ಲಕ್ಷ ಕುಸುಮಾರ್ಚನೆಗಾಗಲಿ ಸಹಸ್ರ ಪಟ್ಟಾಭಿಷೇಕಕ್ಕಾಗಲಿ ೧೫೦—೦೩

(ಈ ಅರ್ಚನೆಗೆ ಬೇಕಾದ ಪೂಜಾ ದ್ರವ್ಯಗಳನ್ನು, ಋತ್ವಿಕ್ಕುಗಳನ್ನು ಪೂಜೆಮಾಡಿಸುವವರೇ ಜೊತೆಮಾಡಿಕೊಳ್ಳಬೇಕು. ಋತ್ವಿಕ್ಕುಗಳಿಗೆ ಕೊಡಬೇಕಾದ ದಕ್ಷಿಣೆಗಳು ಸಹಾ ಅವರೇ ಭರಿಸತಕ್ಕದ್ದು)

೨೨. ದೀರ್ಘದಂಡ ನಮಸ್ಕಾರಗಳಿಗಾಗಲಿ, ದಿಂಡುರುಳಿಕೆಯ ನಮಸ್ಕಾರಗಳಿಗಾಗಲಿ ೫—೦೦

೨೩. ಹ-ಟ್ಟುಕೂದಲು ತೆಗೆಯಿಸುವದಕ್ಕೆ ೬—೦೦

೨೪. ಉಪನಯನಗಳಿಗೆ ೧೦—೦೦

೨೫. ವಿವಾಹಕ್ಕೆ ೨೫—೦೦

೨೬. ಬೆಟ್ಟನಂದಿವಾಹನದ ಸೇವೆಗಾಗಲಿ, ಕೈಲಾಸವಾಹನದ ಸೇವೆಗಾಗಲಿ, ರಾವಣವಾಹನದ ಸೇವೆಗಾಗಲಿ ೨೫—೦೦

೨೭. ಪಲ್ಲಕ್ಕಿಸೇವೆಗೆ ೧೫—೦೦

೨೮. ರುದ್ರಾಕ್ಷ ಸೇವೆಗೆ ೨೫—೦೦

೨೯. ದರ್ಪಣಸೇವೆಗೆ ೫—೦೦

೩೦. ಮಹಾನೈವೇದ್ಯಕ್ಕೆ (ಬೇಯಿಸಿದ ಪದಾರ್ಥಕ್ಕು) ೭—೧೦

—— ——

# ಶ್ರೀ ಭ್ರಮರಾಂಬಿಕಾ ದೇವಾಲಯದಲ್ಲಿ



| | | ರೂ. ಪೈಸೆ |
|---|---|---|
| ೧. | ಶ್ರೀ ಸೂಕ್ತವಿಧಾನದಿಂದ ಸಹಸ್ರನಾಮ ಪೂಜೆಗೆ | ೧೨—೦೦ |
| ೨. | ಸಹಸ್ರನಾಮ ಪೂಜೆಗೆ | ೧೦—೦೦ |
| ೩. | ಶ್ರೀ ಸೂಕ್ತವಿಧಾನದಿಂದ ತ್ರಿಶತಿಪೂಜೆಗೆ | ೧೦—೦೦ |
| ೪. | ತ್ರಿಶತಿಪೂಜೆಗೆ | ೫—೦೦ |
| ೫. | ಶ್ರೀ ಸೂಕ್ತವಿಧಾನದಿಂದ ಖಡ್ಗಮಾಲಾ ಪೂಜೆಗೆ | ೧೦—೦೦ |
| ೬. | ಶ್ರೀ ದೇವೀ ಖಡ್ಗಮಾಲಾ ಪೂಜೆಗೆ | ೫—೦೦ |
| ೭. | ಶ್ರೀ ಸೂಕ್ತವಿಧಾನದಿಂದ ಅಷ್ಟೋತ್ತರ ಶತನಾಮಪೂಜೆಗೆ | ೭—೦೦ |
| ೮. | ಅಷ್ಟೋತ್ತರ ಶತನಾಮ ಪೂಜೆಗೆ | ೫—೦೦ |
| ೯. | ಕರ್ಪೂರದ ಆರತಿಗಾಗಲಿ, ತೆಂಗಿನಕಾಯಿಗಾಗಲಿ, ಬತ್ತಿಗಳು ಬೆಳಗಿಸುವುದಕ್ಕಾಗಲಿ | ೦—೫೦ |
| ೧೦. | ವಸ್ತ್ರಾಲಂಕಾರಕ್ಕೆ | ೫—೦೦ |
| ೧೧. | ಮಹಾನೈವೇದ್ಯಕ್ಕೆ | ೫—೦೦ |
| ೧೨. | ದರ್ಪಣಸೇವೆಗೆ | ೫—೦೦ |
| ೧೩. | ನಂದಾದೀಪಕ್ಕೆ | ೨—೫೦ |
| ೧೪. | ಲಕ್ಷ ಕುಂಕುಮಾರ್ಚನೆಗಾಗಲಿ, ಲಕ್ಷ ಕುಸುಮಾರ್ಚನೆಗಾಗಲಿ | ೧೫೩—೦೦ |

(ಈ ಪೂಜೆಗೆ ಬೇಕಾದ ಸಾಮಗ್ರಿಗಳಿಗಾಗಲಿ, ಋತ್ವಿಕ್ಕುಗಳನ್ನು ಪೂಜೆಮಾಡಿಸಿಕೊಳ್ಳುವವರೇ ಏರ್ಪಾಟು ಮಾಡಿಕೊಳ್ಳಬೇಕು. ಋತ್ವಿಕ್ಕುಗಳಿಗೆ ಕೊಡಬೇಕಾದ ದಕ್ಷಿಣ ತಾಂಬೂಲಾದಿಗಳನ್ನು ಸಹಾ ಅವರೇ ಭರಿಸಬೇಕು.)

...............

## ನಿತ್ಯಾರ್ಚನೆ

ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿಯವರ ದೇವಸ್ಥಾನದಲ್ಲಾಗಲಿ, ಶ್ರೀ ಭ್ರಮರಾಂಬಿಕಾ ದೇವಾಲಯದಲ್ಲಾಗಲಿ ನಡೆಯುವ ನಿತ್ಯಾರ್ಚನಾ ಕಾಲದಲ್ಲಿ ನಿತ್ಯವು ಗೋತ್ರನಾಮಗಳನ್ನು ಸಂಕಲ್ಪದಲ್ಲಿ ಹೇಳಿಸಿಕೊಳ್ಳುವ ಭಕ್ತರು ವರ್ಷಕ್ಕೆ ೨೫ ರೂ. ಸಲ್ಲಿಸತಕ್ಕದ್ದು. ಈ ಪ್ರಕಾರವಾಗಿಯೇ ಯಾವ ದೇವಾ-ಲಯಗಳಲ್ಲಾದರೂ ನಿತ್ಯ ಆರತಿ ಸಮಯಗಳಲ್ಲಿ ಗೋತ್ರನಾಮಗಳನ್ನು ಹೇಳಿಸಿಕೊಳ್ಳಲಿಚ್ಛಿಸುವರು ೧೨ ರೂ. ಸಲ್ಲಿಸಬೇಕು.

ಶ್ರೀ ಮಲ್ಲಿಕಾರ್ಜುನ ದೇವರ ವಿಭೂತಿ ಪ್ರಸಾದವು ಮತ್ತು ಶ್ರೀ ಭ್ರಮರಾಂಬಿಕಾ ದೇವಿಯವರ ಕುಂಕುಮ ಪ್ರಸಾದವು ಅಪೇಕ್ಷಿಸುವ ಭಕ್ತರು ದೇವಾಲಯದ ಕಾರ್ಯನಿರ್ವಾಹಕಾಧಿಕಾರಿ (ಎಗ್ಜಿಕ್ಯೂಟಿವ್ಹ ಆಫೀಸರ್) ಅವರಿಗೆ ಒಂದು ರೂಪಾಯಿ ಮನಿಆರ್ಡರಮಾಡಿ, ಅವರ ಪೂರ್ತಿ ಅಡ್ರೆಸ್ಸು ತಿಳಿಸಿದರೆ ಆ ಪ್ರಸಾದವನ್ನು ಕಳುಹಿಸುತ್ತಾರೆ.

## ಶಾಶ್ವತವಾದ ಅರ್ಚನಾ ಪದ್ಧತಿಗಳು

ಈ ಕೆಳಗೆ ತೋರ್ಪಡಿಸಿದ ಸೇವಾದ್ರವ್ಯವನ್ನು ಸಲ್ಲಿಸಿದವರ ಹೆಸರಿಗಾಗಲಿ ಅವರು ಕೋರಿದವರ ಹೆಸರಿಗಾಗಲಿ, ಕೆಳಗೆ ಉದಹರಿಸಿದ ಅರ್ಚನೆಗಳೂ ವರ್ಷದಲ್ಲಿ ಅವರಪೇಕ್ಷಿಸಿದಲ್ಲಿ ಒಂದು ದಿನ (ಶಿವರಾತ್ರಿ, ಉಗಾದಿ, ಉತ್ಸವ ದಿನಗಳಲ್ಲಿ ಅಲ್ಲದೆ ಇತರ ದಿನಗಳಲ್ಲಿ) ಶಾಶ್ವತವಾಗಿ ನಡೆಯಿಸಲ್ಪಡುವದು. ಅವರು ಸಲ್ಲಿಸಿದ ಸೇವಾ ದ್ರವ್ಯದಿಂದ ಬರುವ ಬಡ್ಡಿ ಮಾತ್ರವೇ ಆಯಾ ಅರ್ಚನೆಗಳಿಗೆ ಉಪಯೋಗಿಸಲ್ಪಡುವದು.

### ಶ್ರೀ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ

| | ಸಲ್ಲಿಸಿದ ದ್ರವ್ಯದ ಮೊತ್ತ | ರೂ. ಪೈಸೆ |
|---|---|---|
| ೧. | ಮಹಾನ್ಯಾಸಪೂರ್ವಕವಾಗಿ ಕಾಠಕ, ಶತಾನುವಾಕ ಸಹಿತ ರುದ್ರಾಭಿಷೇಕ ೧೧ ಆವರ್ತಿಗಳಿಗೆ | ೪೦೦೦—೦೦ |

೨. ಮಹಾನ್ಯಾಸಪೂರ್ವಕವಾಗಿ ಕಾಠಕ, ಶತಾನುವಾಕ ಸಹಿತ
ಸಕೃದ್ವಾರಾಭಿಷೇಕ ಏಕಾವರ್ತಿಗೆ ೨೦೦೦—೦೦
೩. ಮಹಾನ್ಯಾಸಪೂರ್ವಕವಾಗಿ ಮಹಾರುದ್ರಾಭಿಷೇಕ
೧೨೧ ಆವರ್ತಿಗಳಿಗೆ ೨೦೦೦—೦೦
೪. ಮಹಾನ್ಯಾಸಪೂರ್ವಕವಾಗಿ ರುದ್ರಾಭಿಷೇಕ
೧೧ ಆವರ್ತಿಗಳಿಗೆ ೧೦೦೦—೦೦
೫. ಮಹಾನ್ಯಾಸಪೂರ್ವಕವಾಗಿ ಸಕೃದ್ವಾರಾಭಿಷೇಕ
ಏಕಾವರ್ತಿಗೆ ೬೦೦—೦೦
೬. ಲಘುನ್ಯಾಸಪೂರ್ವಕವಾಗಿ ರುದ್ರಾಭಿಷೇಕ
೧೧ ಆವರ್ತಿಗಳಿಗೆ ೮೦೦—೦೦
೭. ಲಘುನ್ಯಾಪೂರ್ವಕವಾಗಿ, ಸಕೃದ್ವಾರಾಭಿಷೇಕ
೧೧ ಆವರ್ತಿಗಳಿಗೆ ೪೦೦—೦೦
೮. ರುದ್ರಾಭಿಷೇಕ ೧೫ ಆವರ್ತಿಗಳಿಗೆ ೬೦೦—೦೦
೯. ಸಕೃದ್ವಾರಾಭಿಷೇಕ ಏಕಾವರ್ತಿಗೆ ೩೦೦—೦೦
೧೦. ಪಂಚಾಮೃತ ಸ್ನಾನಕ್ಕೆ ೧೫೦—೦೦
೧೧. ಅಷ್ಟೋತ್ತರ ಶತನಾಮಪೂಜೆಗೆ ೧೫೦—೦೦
೧೨. ಸಹಸ್ರನಾಮ ಪೂಜೆಗೆ ೨೫೦—೦೦

## ಶ್ರೀ ಭ್ರಮರಾಂಬಿಕಾ ದೇವಿಯವರ ದೇವಸ್ಥಾನದಲ್ಲಿ

೧. ಸಹಸ್ರನಾಮ ಪೂಜೆಗೆ ೩೦೦—೦೦
೨. ಅಷ್ಟೋತ್ತರ ಶತನಾಮಪೂಜೆಗೆ ೧೫೦—೦೦

ಶಿವರಾತ್ರಿ ಉತ್ಸವಗಳಲ್ಲಿ ನಿಯಮಿತ ಸಮಯದಲ್ಲಿ ಯಾವ ವಿಧವಾದ ಸೇವಾ ದ್ರವ್ಯವಿಲ್ಲದಲೆ ಧರ್ಮದರ್ಶನವು ಲಭ್ಯವಾಗುತ್ತದೆ.

ಭವನಗಳು, ಕುಟೀರಗಳು ನಿರ್ಮಿಸುವುದಕ್ಕೆ ಸಹಾಯ ದ್ರವ್ಯವನ್ನು ಕೊಟ್ಟ ಧಾತೃಗಳಿಗೆ ಕೆಲವು ಪ್ರತ್ಯೇಕ ಸೌಕರ್ಯಗಳು ಲಭಿಸುತ್ತವೆ.

ಸೂಚನೆ— ಆಂಧ್ರ ಪ್ರದೇಶದ ಪ್ರಭುತ್ವದವರ ದೇವಾದಾಯ, ಧರ್ಮಾ ದಾಯ ಶಾಖೆಯುವರು ಪ್ರಕಟಿಸುವ 'ಆರಾಧನೆ' ಮಾಸಪತ್ರಿಕೆಯ ಸಂಚಿಕೆ ೩, ಸಂಚಿಕೆ ೯–೧೦ ರಲ್ಲಿ ಶ್ರೀಶೈಲದ ದೇವಸ್ಥಾನದವರು ಪ್ರಕಟಿಸಿದ 'ವಿಜ್ಞಪ್ತಿ' ಯನ್ನನುಸರಿಸಿ ಈ ಪಟ್ಟಿಕೆಯು ಕೊಡಲ್ಪಟ್ಟಿರುವದು.

# ಯಾತ್ರಿಕರು ಮತ್ತು ಪಾಠಕರು ತಿಳಿದುಕೊಳ್ಳತಕ್ಕ ಮುಖ್ಯಾಂಶಗಳು

## ಶ್ರೀಶೈಲವೆಂಬ ಹೆಸರು ಬಂದ ಕಾರಣ



ಶ್ರೀಶೈಲವನ್ನು ಸ್ಕಾಂದಪುರಾಣದಲ್ಲಿ ಶ್ರೀಶೈಲಖಂಡದಲ್ಲಿ ಶ್ರೀ ವ್ಯಾಸ ಮಹರ್ಷಿಗಳು ವರ್ಣಿಸಿರುವರು ಇದನ್ನು ಶೇಷಪರ್ವತವೆನ್ನುತ್ತಾರೆ. ಈ ಶಬ್ದವನ್ನು ಯೋಜಿಸಿ ನೋಡಲಾಗಿ ಈ ಕ್ಷೇತ್ರವು ಉತ್ತರಭಾಗ ಚತುರ್ದಿಕ್ಕು ಗಳಲ್ಲಿ ೨೦ ಮೈಲು ಸಮವಾದ ದೂರದಲ್ಲಿರುವದು. ಆ ಭಾಗವು ಸರ್ಪದ ಹೆಡೆಯಂತೆ ವಿಶಾಲವಾಗಿದೆ. ಈ ಗಿರಿಯ ದಕ್ಷಿಣದಲ್ಲಿ ಆಹೋಬಲನಾರಶಿಂಹ ಸ್ವಾಮಿಯ ದೇವಸ್ಥಾನವಿರುವದು. ಈ ಭಾಗವು ಸರ್ಪದ ಹೊಟ್ಟೆಯ ಆಕಾರ ದಂತಿದೆ. ಇಲ್ಲಿಂದ ಮತ್ತು ದಕ್ಷಿಣಕ್ಕೆ ಹೋದರೆ ತಿರುಪತಿ ಕ್ಷೇತ್ರವು ಸಿಕ್ಕು ತ್ತದೆ. ಈ ಭಾಗವು ಸರ್ಪದ ಬಾಲದಂತಿರುವದು. ಶೇಷಪರ್ವತವೆಂಬ ಶಬ್ದವು ಈ ರೀತಿಯಾಗಿರುವುದರಿಂದಲೇ ಈ ಹೆಸರು ಬಂದಿರಬಹುದಾಗಿ ತೋರುತ್ತದೆ.

## ಶ್ರೀಶೈಲವನ್ನು ಸಮುದ್ರಕ್ಕೆ ಹೋಲಿಸಿರುವರು

ಇಲ್ಲಿ ಮಹಾ ಮಹಾ ನದಿಗಳಿದ್ದು ಪುಣ್ಯತೀರ್ಥಗಳಿಂದು ಪ್ರಸಿದ್ಧವಾಗಿ ರುವವು. ಅನೇಕ ದೇಶಗಳಲ್ಲಿ ಪ್ರವಹಿಸಿ ಸಸ್ಯಶ್ಯಾಮಲವನ್ನಾಗಿ ಮಾಡಿರು ತ್ತದೆ. ಭಯಂಕರವಾದ ಕಾಡುಗಳಿರುವವು. ಅಲ್ಲಿ ಕ್ರೂರ ಮೃಗಗಳು ಇರುವವು. ಹಲವು ನದಿಗಳು ಪಾತಾಳಗಂಗೆಯಲ್ಲಿ ಸೇರುವುದರಿಂದ ಶಿವಕವಿ

ಚಂದ್ರರಾದ ಪಾಲ್ಕುರಿಕಿ ಸೋಮನಾಥ ಕವಿಗಳು ಶ್ರೀಶೈಲ ಕ್ಷೇತ್ರವನ್ನು ಸಮುದ್ರಕ್ಕೆ ಹೋಲಿಸಿರುವರು. ಈ ಪರ್ವತವು ಮುಕ್ತಿದಾಯಕ ಕ್ಷೇತ್ರವೆಂದು ಪರಿಗಣಿಸಲ್ಪಟ್ಟಿರುವದು.

## ಪರ್ವತದ ದಾರಿಗಳು

ಈ ವಿಷಯುವನ್ನು ಕುರಿತು ಪ್ರಥಮದಲ್ಲಿಯೇ ವಿವರಿಸಿರುವೆವು. ಮತ್ತು ಶ್ರೀಪರ್ವತಕ್ಕೆ ಮೋಟಾರು ರಸ್ತೆಯಾಗಿರುವುದರಿಂದ ಈ ವಿಷಯದ ವಿವರಣೆ ಅನವಸರ.

## ನಾಗಲೂಟಿ

ಒಂದು ಹಳ್ಳಿ. ಇಲ್ಲಿ ಚೆಂಚರು ವಾಸವಾಗಿರುವರು. ಇಲ್ಲಿ ಇಪ್ಪತ್ತು ಗುಡಿಸಲುಗಳಿವೆ. ಈ ಚೆಂಚರು ಕರ್ಷಕರಾಗಿರುವರು. ಮತ್ತು ಅರಣ್ಯದ ಸೌದೆಯನ್ನು ಕಡಿದು ತಂದು ವಿಕ್ರಯಿಸಿ ಜೀವಿಸುತ್ತಾರೆ. ಈ ಹಳ್ಳಿಗೆ ೨॥ ಮೈಲು ದೂರದಲ್ಲಿ ಗೋಸಾಯಿಕಟ್ಟೆಯೆಂಬುದಿರುವದು. ಇಲ್ಲಿ ಫಾರೆಸ್ಟು ಡಿಪಾರ್ಟಮೆಂಟಿನ ಕಾರ್ಯಸ್ಥಾನವಿರುವದು. ಎರಡು ಧರ್ಮಛತ್ರಗಳು ದೇವಾಲಯವು ಇರುವವು. ಯಾತ್ರಿಕರ ಸಲುವಾಗಿ ಎರಡು ದೊಡ್ಡ ಕೊಳಗಳಿರುವವು. ಇದರಲ್ಲಿಯ ನೀರು ಸ್ವಚ್ಛವಾಗಿರುವವು. ನಂದಿಬಾಯಿಯೊಳಗಿನಿಂದ ನೀರು ಬೀಳುತ್ತಿರುವವು. ಇವು ಎಲ್ಲಿಂದ ಬರುತ್ತಿರುವದೂ ಗೊತ್ತಾಗುವಂತಿಲ್ಲ. ತುಂಬಿಹರಿಯುತ್ತಿದ್ದ ನೀರು ವ್ಯರ್ಥವಾಗದಂತೆ ಮೇನೇಜ್‌ಮೆಂಟು ಸಮಿತಿಯವರು ಒಂದು ದೊಡ್ಡ ಕೊಳವನ್ನು ಮೂವತ್ತು ವರ್ಷಗಳ ಕೆಳಗೆ ನಿರ್ಮಿಸಿರುತ್ತಾರೆ. ಈ ನೀರು ಯಾತ್ರಿಕರಿಗೆ ವಿಶೇಷವಾಗಿ ಅನುಕೂಲವಾಗಿದೆ. ಇಲ್ಲಿ ಪುರಾತನ ಕಾಲದ ಒಂದು ವೀರಭದ್ರ ದೇವಸ್ಥಾನವಿರುವದು. ದೇವಾಲಯದ ಸುತ್ತಲೂ ಶಿಖರಗಳು, ಗೋಪುರಗಳು, ಮಂಟಪಗಳು, ಕೋಟೆಯ ಗೋಡೆಗಳು, ಶಿಥಿಲವಾದ ದೇವಾಲಯಗಳು, ಹಾಳ ಮನೆಗಳು, ಬೀದಿಗಳೂ ಕಾಣುತ್ತಲಿರುವವು. ಇದು ೧೬ ನೇ ಶತಾಬ್ದದಿಂದೀಚೆಗೆ ಸಂಪತ್ಸಮೇತವಾದ ಸ್ಥಾನವಾಗಿದ್ದಿತೆಂದೂಹಿಸಬಹುದಾಗಿದೆ.

ಈ ವೀರಭದ್ರ ದೇವಸ್ಥಾನದ ಮಹಾದ್ವಾರದ ಕೆಲವು ಗಜಗಳ ದೂರದಲ್ಲಿ, ಮನೋಹರವಾದ ಶಿಲಾಮಂಟಪದನಿ ಕಾಲುಬಂಡಿಗೆ ನಂದೀಶ್ವರ ವಿಗ್ರವೆಂ

ಬಂದಿರುವದು. ಈ ಮೂರ್ತಿಯು ಕರೀಶಿಲೆಯಿಂದ ೫॥ ಅಡಿ ಎತ್ತರ, ೩॥ ಅಡಿ ಅಗಲವಾಗಿ ಕೆತ್ತಲ್ಪಟ್ಟಿರುವದು. ಈ ನಂದಿಯ ಮಹತ್ವ ವಿಶೇಷ ವಾಗಿದೆ. ಯಾತ್ರಿಕರು ಶ್ರೀಮಲ್ಲಿಕಾರ್ಜುನನ ದರ್ಶನಕ್ಕೆ ಹೋ ಎವ ಪ್ರಾರಂಭ ದಲ್ಲಿ ಈ ನಂದೀಶ್ವರನ ದರ್ಶನ ಮಾಡಿಕೊಂಡೇ ಹೋಗಬೇಕು. ಹಾಗೆ ಹೋದವರಿಗೆ ಯಾವ ತೊಂದರೆಗಳೂ ಆಗುವದಿಲ್ಲ. ದರ್ಶನ ಮಾಡಿಕೊಳ್ಳದೇ ಹೋದರೆ ದಾರಿಯು ೧೮ ಮೈಲು ದೂರದಲ್ಲಿ ಹತ್ತಿ ಇಳಿದು ಅತ್ಯಂತಾಯಾಸ ದಿಂದ ಬಳಲಬೇಕಾಗುತ್ತದೆ. ಈ ನಾ ಲೂಟಿ ವೀರಭದ್ರದೇವರೂ, ನಂದೀಶ್ವ ರನೂ ಶ್ರೀಗಿರಿ ಮಲ್ಲಿಕಾರ್ಜುನನ ಕಡೆಗೇನೇ ಮುಖಮಾಡಿಕೊಂಡಿರುತ್ತಾರೆ. ಈ ವೀರಭದ್ರ ವಿಗ್ರಹವು ೧೬ ಅಡಿ ಎತ್ತರ, ೩॥ ಅಡಿ ಅಗಲವಾಗಿ ಭೀಕರವಾ ಗಿರುವದು. ಇಲ್ಲಿ ಕೆಲವು ಅಂಗಡಿಗಳಿರುವವು ಯಾತ್ರಿಕರಾಗಿ ಬರುವ ಸಮಸ್ತ ಧರ್ಮದವರಿಗನುಕೂಲವಾಗಿರುವಂತೆ ಒಂದು ಅನ್ನಛತ್ರವನ್ನು ಸಮಸ್ತರೂ ಸೇರಿ ನಿರ್ಮಿಸಿರುತ್ತಾರೆ. ಇಲ್ಲಿ ಪೋಲೀಸ ಡಿಪಾರ್ಟಮೆಂಟು ಕಾರ್ಯಸ್ಥಾನ ಮತ್ತು ಹೆಲ್ತ್ ಡಿಪಾರ್ಟಮೆಂಟು ಕಾರ್ಯಸ್ಥಾನವೂ ಇರುವದು.

## ಪೆದ್ದ ಚೆರುವು (ದೊಡ್ಡ ಕೆರೆ)

ಆಂಧ್ರಭಾಷೆಯಲ್ಲಿ ಗ್ರಾಮವನ್ನು (ಪೆದ್ದ ಚೆರುವು) ಎನ್ನುತ್ತಾರೆ. ನಮ್ಮ ಕನ್ನಡ ಭಾಷೆಯಲ್ಲಿ (ದೊಡ್ಡಕೆರೆ) ಎನ್ನುತ್ತಾರೆ. ಇಲ್ಲಿಂದ ಶ್ರೀ ಮಲ್ಲೇಶ್ವರ ದೇವಸ್ಥಾನವು ೯ ಮೈಲು ದೂರದಲ್ಲಿರುವದು. ನಾಗಲೂಟಿಯಿಂದಲೂ ಈ ಪೆದ್ದಚೆರುವಿನಿಂದಲೂ ಮಹಾಕ್ಷೇತ್ರಕ್ಕೆ ಹೋಗುವದು ಬಹು ದುಸ್ತರವಾದ ಕಾರಣ ಅಶಕ್ತರು ಡೋಲಿಗಳ ಮೇಲೆ ಹೋಗುತ್ತಾರೆ. ಪ್ರಥಮದಲ್ಲಿ ಮುಕ್ಕಾಲು ಮೈಲು ಬಹು ಕಡಿದಾದ ಮಾರ್ಗವಾದುದರಿಂದ ಇದನ್ನು ಯಮ ಪುರಿ ಮಾರ್ಗವೆಂದು ಹೆಸರಿಟ್ಟಿರುವರು. ಈ ಹಾದಿಯಲ್ಲಿ ಕುಳಿತುಕೊಳ್ಳದೆ ಮಹಾದ್ವಾರದವರೆಗೂ ಹೋಗಬೇಕೆಂತಲೂ ಮಧ್ಯದಲ್ಲಿ ಕುಳಿತುಕೊಂಡರೆ ಯಮದಂಡನೆಯಾಗುವದೆಂತಲೂ ಹೇಳುತ್ತಾರೆ.

## ಭೀಮುನಕೊಳ

ಇಲ್ಲಿಂದ ದ್ವಾರಕ್ಕೆ ೮॥ ಮೈಲು ಹಾದಿ ಇದನ್ನು ಸ್ವರ್ಗವೆನ್ನುತ್ತಾರೆ. ಅಲ್ಲಿಂದ ಭೀಮುನಕೊಳ ಬರುವದು. ಇದನ್ನು ದಾಟಿದರೆ ೭ ಮೈಲಿನ ಹಾದಿಗೆ

ವೈಕುಂಠವೆನ್ನುತ್ತಾರೆ. ಅಲ್ಲಿಂದ ೨॥ ಮೈಲು ಹಾದಿಗೆ ಕೈಲಾಸವೆನ್ನುತ್ತಾರೆ. ಪ್ರಾಚೀನರೀ ಕಷ್ಟಗಳನ್ನು ನೋಡಿ ಈ ಹೆಸರುಗಳನ್ನಿಟ್ಟಿರುವಂತೆ ಕಾಣುತ್ತಿದೆ. ಈ ಹಾದಿಗಳ ಎಲ್ಲಾ ಕಡೆಗಳಲ್ಲಿಯೂ ೮, ೧೦, ೧೫ ಅಡಿಗಳ ವಿಶಾಲವಾಗಿ ರುತ್ತದೆ. ನಾಗಲೂಟಿಯಿಂದ ೨॥ ಮೈಲು ದೂರದಲ್ಲಿ ಒಂದು ಬಾವಿ. ಮುಂದೆ ಒಂದು ಮೈಲು ದೂರದಲ್ಲಿ ಅಂಬಲಿಹಳ್ಳ ಈ ಸ್ಥಳಗಳಲ್ಲಿ ಪೋಲೀಸರ ಕಾವಲಿ ಯಿಂದ ನೀರಿನ ಸೌಕರ್ಯವಿರುತ್ತದೆ. ಈ ಪೆದ್ದಚೆರುವಿನಲ್ಲಿ ವೀರಶೈವ ಯಾತ್ರಿಕರ ಸೌಕರ್ಯಕ್ಕಾಗಿ ಶ್ರೀ ಉಲಚಾಲ ಸದಾಶಿವಯ್ಯನವರೂ, ಬ್ರಾಹ್ಮಣರಿಗೆ ಶ್ರೀ ಕರಿಪೆನ ಸೋಮಸುಂದರ ಶಾಸ್ತ್ರಿಗಳೂ ಅನ್ನಛತ್ರಗಳನ್ನು ಏರ್ಪಡಿಸಿರುತ್ತಾರೆ. ಇವರು ಅನ್ನಛತ್ರಗಳನ್ನು ನಡೆಯಿಸುವುದರಲ್ಲಿ ಕೀರ್ತಿ ಯನ್ನು ಗಳಿಸಿಕೊಂಡಿರುತ್ತಾರೆ. ಈ ಎರಡು ಛತ್ರಗಳು ಶಿವರಾತ್ರಿಕಾಲದ ಲ್ಲಿಯೂ ಉಗಾದಿ ಉತ್ಸವಕಾಲಗಳಲ್ಲಿಯೂ ಈ ಯಾತ್ರಿಕರಿಗೆ ಉಪಕಾರ ಮಾಡುತ್ತಿರುವರು. ಇದಲ್ಲದೆ ಲಂಬಾಣಿ ಬಾಲ-ಬಾಲಕಿಯರಿಗೆ ಪ್ರಭುತ್ವದ ವರು ಒಂದು ಪಾಠಶಾಲೆಯನ್ನು ಸಹಾ ಏರ್ಪಡಿಸಿರುವರು. ಈ ವಿದ್ಯಾರ್ಥಿ ಗಳಿಗೆ ಕೈಕೆಲಸಗಳನ್ನು, ಕೃಷಿವೃತ್ತಿಯನ್ನು ಕಲಿಸುತ್ತಲಿದ್ದಾರೆ. ಒಬ್ಬಂಟಿಗ ರಾಗಿ ಬಂದು ಛತ್ರದಲ್ಲೀ ಊಟ ಮಾಡಬೇಕೆನ್ನುವವರಿಗೆ ಹೋಟಲು ಸಹಾ ಇರುತ್ತದೆ ಊಟ-ಫಲಹಾರಗಳೂ, ಕಾಫಿ ಮುಂತಾದವುಗಳೂ ಸಿಕ್ಕುತ್ತವೆ.

ಸಧ್ಯ ಮೋಟಾರು ರಸ್ತೆ ಪ್ರಾರಂಭವಾಗಿದೆಯಾದುದರಿಂದ ೪-೫ ಗಂಟೆ ಗಳ ಹೊತ್ತಿನಲ್ಲಿಯೇ ಶ್ರೀಶೈಲಾಧೀಶನ ಸನ್ನಿಧಿಯನ್ನು ಸೇರಬಹುದು.

## ಕೈಲಾಸದ್ವಾರ

ಆ ನಲ್ಲಮಲೆ ಪರ್ವತಗಳಲ್ಲೆಲ್ಲಾ ಇದೇ ಅತ್ಯಂತ ಎತ್ತರವಾದ ಪರ್ವತ. ಆ ಬೆಟ್ಟದ ಮೇಲ್ಭಾಗದಲ್ಲಿ ದೊಡ್ಡಬಾಗಿಲುಗಳನ್ನು ಕಟ್ಟಿ ಅಲ್ಲಿ ಕೆಲವು ವಿಗ್ರಹಗಳನ್ನು ನೆಲೆಗೊಳಿಸಿರುವರು. ಮನುಷ್ಯನು ಭೂಲೋಕದಿಂದ ಹೊರಟು ಕೈಲಾಸವನ್ನು ಸೇರಬೇಕಾದರೆ ಏಳು ಲೋಕಗಳನ್ನು ಹತ್ತಿ ಹೋಗಬೇಕಾದಂತೆ, ಈ ಭೂಕೈಲಾಸಕ್ಕೆ ಹೋಗಬೇಕಾದರೂ ಕಾಡಿನಲ್ಲಿ ಹೊಕ್ಕು ಹಸಿವೆ-ತೃಷೆಗಳಿಗೆ ಸಹಿಸಿ, ಅರಿಷಡ್ವರ್ಗಗಳಿಗಂಜುತ್ತಾ ಬಳಲಿ, ಬೇಸತ್ತು ಬೆಂಡಾಗಿ, ಶ್ರೀ ಮಲ್ಲಿಕಾರ್ಜುನನ ಸನ್ನಿಧಿಯನ್ನು ಸೇರಬೇಕಾಗು

ತ್ತದೆ. ಈ ಕಷ್ಟಗಳೆಲ್ಲವೂ ಪ್ರಭುತ್ವದವರು ದೂರಮಾಡಿರುವುದರಿಂದ ಅಲ್ಲಿರುವ ಕೀಕಾರಣ್ಯಗಳನ್ನು, ಭೀತಿದಾಯಕವಾದ ಮಾರ್ಗಗಳನ್ನು ಕುರಿತು ಬರೆಯುವದನವಶ್ಯವೆಂದು ಬಿಡಲಾಗಿದೆ. ಒಂದೇ ಮಾತಿನಲ್ಲಿ ಹೇಳಬೇಕಾದರೆ ಇದೇ ಮಹಾಸನ್ನಿಧಿಯ ಮೊದಲನೇ ದಾರಿ.

## ೨ ನೇ ದಾರಿ

ಈ ದಾರಿಯು ಬೆಜವಾಡ, ನೆಲ್ಲೂರು ಮತ್ತು ಕಾಕಿನಾಡ ವಗೈರೆ ಜಿಲ್ಲೆಗಳಿಂದ ಬರುವವರು ಮಾರ್ಕಾಪುರ ಸ್ಟೇಷನ್ನಿನಲ್ಲಿ ಇಳಿದರೆ ಅನುಕೂಲ, ಅಲ್ಲಿಂದ ತೋರಣಾಲಿಗೆ ಬಂದು ಸಧ್ಯ ಅನುಕೂಲವಾಗಿರುವ ಮೋಟಾರಿನಲ್ಲಿ ಶ್ರೀಶೈಲ ಸೇರಬಹುದಾಗಿದೆ.

## ೩ ನೇ ದಾರಿ

ಈ ದಾರಿಯು ಗುಂಟೂರು, ಬೆಜವಾಡ ಮತ್ತು ವಿಶಾಖ ಪಟ್ಟಣವೇ ಮುಂತಾದ ಈಶಾನ್ಯದ ಜಿಲ್ಲೆಗಳಿಂದ ಬರುವವರು ವಿನುಕೊಂಡ ರೈಲ್ವೆಸ್ಟೇಷನ್ನಿನಲ್ಲಿಳಿಯುತ್ತಾರೆ.

## ೪ ನೇ ದಾರಿ

ಈ ದಾರಿಯು ನೈಜಾಂಪ್ರಾಂತದ ಉತ್ತರ ದಿಕ್ಕಿನಿಂದ ಬರುವ ಯಾತ್ರಿಕರಿಗೆ ಅನುಕೂಲ. ಈ ಹಾದಿಯು ಪಾದಚಾರಿಗಳಿಗೆ ಕಳ್ಳರ-ಕಾಕರ ಭಯವನ್ನುಂಟು ಮಾಡುವದಾದುದರಿಂದ ಯಾತ್ರಿಕರು ಕರ್ನೂಲು, ಆತ್ಮಕೂರಗಳಿಂದ ಮೋಟಾರುಗಳ ನಿಲ್ದಾಣಕ್ಕೆ ಸೇರಬಹುದಾಗಿದೆ.

ಈ ಪ್ರಕಾರ ಚತುರ್ದಿಕ್ಕುಗಳಿಂದಲೂ ಮಹಾದೇವನ ದರ್ಶನಾರ್ಥವಾಗಿ ಇಲ್ಲಿಯವರೆಗೂ ಇದ್ದ ದುರ್ಗಮ ಮಾರ್ಗಗಳಿಂದಲೇ ನಾಲ್ಕಾರು ಕೋಟಿ ಜನರು ಬರುತ್ತಿದ್ದರು. ಸಧ್ಯ ರಾಜಬೀದಿಯು, ಸರಾಗವಾಗಿ ಹೋಗಿ ಬರುವ ಮೋಟಾರು ರಸ್ತೆ ಯೇರ್ಪಟ್ಟಿರುವುದರಿಂದ ಹತ್ತು ಕೋಟಿ ಜನರು ನಿರಾಚ್ಛೇದಕವಾಗಿ ಬಂದು ಶ್ರೀಮಲ್ಲಿಕಾರ್ಜುನನ ದರ್ಶನಾಶೀರ್ವಾದಗಳನ್ನು ಪಡೆಯಬಹುದಾಗಿದೆ. ಇಲ್ಲಿ ಕುಲ, ಜಾತಿಗೋತ್ರಾದಿಗಳ ಭೇದಗಳಿಲ್ಲದೆ ಹೈಂದವರೆಲ್ಲರೂ ಭೂಲೋಕ ಕೈಲಾಸಕ್ಕೆ ಬಂದು ತೃಪ್ತರಾಗಬಹುದು ಮತ್ತು ಧನ್ಯರಾಗಬಹುದು.

# ಮಹಾನಂದಿ ಕ್ಷೇತ್ರ



ಈ ಕ್ಷೇತ್ರವು ಕರ್ನೂಲ ಜಿಲ್ಲೆಯ ನಂದ್ಯಾಲ ತಾಲೂಕಿನಲ್ಲಿ ಆ ಗ್ರಾಮಕ್ಕೆ ೯ ಮೈಲು ದೂರದಲ್ಲಿದೆ. ಯಾತ್ರಿಕರು ನಂದ್ಯಾಲ ಅಥವಾ ಗಾಜುಲಪಲ್ಲಿ ರೇಲ್ವೆಸ್ಟೇಷನ್ನಿನಿಂದ ಬರುತ್ತಾರೆ. ಗಾಜುಲಪಲ್ಲಿಯಿಂದ ಕ್ಷೇತ್ರಕ್ಕೆ ೪ ಮೈಲು ದೂರ. ಈ ಕ್ಷೇತ್ರದ ರಥೋತ್ಸವವು ಶಿವರಾತ್ರಿಯಲ್ಲಿಯೇ ನಡೆಯುತ್ತಿದೆ. ಈ ಸ್ಥಲವತಿಮನೋಹರ ಇಲ್ಲಿಯ ಪುಷ್ಕರಿಣಿ ಶಿಲ್ಪಕಲಾ ಕೌಶಲ್ಯವತ್ಯಂತ ನೇತ್ರಾನಂದವನ್ನುಂಟು ಮಾಡುತ್ತಿದೆ. ಇಂತಹ ತಂಪು, ಸೊಂಪು ಮತ್ತೆಲ್ಲಿಯೂ ಕಾಣುವದಿಲ್ಲವೆಂದು ಹೇಳಬಹುದು. ದೇವಾಲಯವು ಇಂದಿನವರೆಗೂ ಭದ್ರವಾಗಿದೆ ಉತ್ತರ, ದಕ್ಷಿಣ, ಪಶ್ಚಿಮ ದಿಕ್ಕುಗಳಲ್ಲಿ ಎತ್ತರವಾದ ಶಿಖರಗಳಿಂದ ಮಿಳಿತವಾದ ಮಹಾದ್ವಾರಗಳಿವೆ. ಒಳಗಣ ಪ್ರಾಕಾರದ ಆವರಣದ ನಡುವೆ ಮಹಾನಂದಿ ಲಿಂಗವು, ಎಡಭಾಗದ ಬೇರೊಂದು ದೇವಸ್ಥಾನದಲ್ಲಿ ಪಾರ್ವತಿಯ ವಿಗ್ರಹವು ಇರುವದು. ಮುಂಭಾಗದಲ್ಲಿ ಪುಷ್ಕರಣಿ ಇರುವದು. ಅಲ್ಲಿಯೂ ಒಂದು ಮಂಟಪವು ಅಲ್ಲೊಂದು ಲಿಂಗವೂ ಇರುವದು. ಸ್ನಾನಾರ್ಥಿಗಳಿಗಿಳಿಯಲು ನಾಲ್ಕೂ ಕಡೆಯಲ್ಲಿ ಸೋಪಾನಗಳಿವೆ. ವಿಶ್ರಮಿಸಲು ಮಂಟಪಗಳೂ ಇವೆ. ಪುಷ್ಕರಣಿಯ ನೀರಿನ ಝರಿಯು ಮಹಾನಂದಿಯ ಲಿಂಗದ ಕೆಳಗಿನಿಂದ ಒಂದು, ನಂದಿ ವಿಗ್ರಹದ ಬಾಯಿಯಿಂದಲೂ ಪುಷ್ಕರಣಿಗೆ ಯಾವಾಗಲೂ ಬೀಳುತ್ತದೆ. ಈ ಸರೋವರವು ಅತ್ಯಂತ ಸ್ವಚ್ಛವಾಗಿ ೪॥ ಅಡಿ ಆಳದ ನೀರಿನಿಂದ ಯಾವಾಗಲೂ ತುಂಬಿರುತ್ತದೆ. ಹೆಚ್ಚಾದ ನೀರು ವ್ಯವಸಾಯಕ್ಕೆ ಉಪಯೋಗಿಸುತ್ತಾರೆ. ಯಾತ್ರಿಕರು ಸಂಕಲ್ಪಪೂರ್ವಕವಾಗಿ ಈ ಸರೋವರದಲ್ಲಿ ಸ್ನಾನಮಾಡಿ ಮಹಾನಂದಿ ಲಿಂಗವನ್ನು ಭಕ್ತಿಯಿಂದ ಪೂಜಿಸುತ್ತಾರೆ ಯಾತ್ರಿಕರ ಅಡಿಗೆ ವಸತಿಗಳಿಗೆ ಈ ಕ್ಷೇತ್ರವು ತುಂಬಾ ಅನುಕೂಲವಾಗಿದೆ.

ಇದಲ್ಲದೆ ಉತ್ತರ, ದಕ್ಷಿಣ ದ್ವಾರಗಳಿಗೆ ೫೦, ೪೦ ಗಜಗಳ ದೂರದಲ್ಲಿ ಗರುಡನಂದೀಶ್ವರಲಿಂಗ, ವಿಷ್ಣುನಂದೀಶ್ವರಲಿಂಗಗಳಿರುವವು. ಅಲ್ಲಿಯೂ ಬ್ರಹ್ಮ

ಗುಂಡ, ವಿಷ್ಣುಗುಂಡವೆಂಬ ಸರೋವರಗಳಿರುವವು. ಶ್ರೀಶೈಲಕ್ಕೆ ಹೋಗುವ ವರೆಲ್ಲರೂ ಈ ಮಾರ್ಗವಾಗಿಯೇ ಬಂದು ಈ ಲಿಂಗವನ್ನು ಸಂದರ್ಶನ ಮಾಡಿಕೊಂಡೇ ಮುಂದಕ್ಕೆ ಹೋಗುತ್ತಾರೆ. ಈ ಲಿಂಗದ ಸುತ್ತಳತೆಯು ೨೨॥ ಅಂಗುಲ, ಪಾಣಿವಾಟವು ೪೯ ಅಂಗುಲ ಆಧುನಿಕ ಭಕ್ತರು ಪಾರ್ವತಿ ದೇವಸ್ಥಾನವನ್ನು ನವೀನವಾಗಿ ನಿರ್ಮಿಸಿರುವರು.

## ಪ್ರಾಚೀನತ್ವ



ಶ್ರೀಶೈಲಕ್ಷೇತ್ರ ಪ್ರಾಚೀನತ್ವವನ್ನು ಕುರಿತು ಈ ಹಿಂದೆಯೇ ವಿವರಿಸಿರು ವೆವು. ಪುನಃ ಪುನಃ ಚರ್ಚಿಸುವದು ಅನಾವಶ್ಯಕವೆಂದು ಭಾವಿಸಿರುವೆವು. ಮತ್ತು ಹೇಳಬೇಕಾದರೆ ಕ್ರಿ. ಶ. ೬ ನೇ ಶತಮಾನದಲ್ಲಿ ಶ್ರೀಶೈಲ ಕ್ಷೇತ್ರದ ಪ್ರಾಂತವೆಲ್ಲವೂ ಕದಂಬ ಅರಸನಾದ ಮಯೂರವರ್ಮನ ಅಧೀನದಲ್ಲಿ ದ್ದಿತೆಂತಲೂ ಆತನ ಕಾಲದಲ್ಲಿ ತುಂಬಾ ಪ್ರಸಿದ್ಧಿಯಾಗಿದ್ದಿತೆಂತಲೂ ಕ್ರಿ. ಶ. ೧೯೧೫ ರಲ್ಲಿ ಶ್ರೀ ಕೃಷ್ಣಶಾಸ್ತ್ರಿಯವರು ಶಿಲಾಲಿಪಿಗಳನ್ನೋದಿ ಬರೆದಿರುವರು. ತಮಿಳು ದೇಶದ ಪಂಡಿತರಾದ ಅಪ್ಪರ್, ಸುಂದರ್, ಸಮುಂದರ್‌ಯೆನ್ನುವ ಪಂಡಿತರು ತಮ್ಮ ಶೇವಾರಂದಲ್ಲಿ ೭ ಮತ್ತು ೮ ನೇ ಶತಮಾನದ ಶ್ರೀಶೈಲ ಕ್ಷೇತ್ರದ ವೈಭವವನ್ನು ಕುರಿತು ಬರೆದಿರುವರು.

ಕ್ರಿ. ಶ. ೧೧ನೇ ಶತಮಾನದಲ್ಲಿ ಪ್ರಸಿದ್ಧ ವೀರಶೈವ ಕವಿಯಾಗಿ ಶ್ರೀಶೈಲ ದಲ್ಲಿದ್ದು ಶ್ರೀಕರ ಭಾಷ್ಯವನ್ನು ರಚಿಸಿ ಅದರಲ್ಲಿ ಶ್ರೀಶೈಲದ ಮಹಿಮೆಯನ್ನು ವರ್ಣಿಸಿರುವನು. ಆ ಕಾಲದ ಪಶ್ಚಿಮ ಚಾಲುಕ್ಯರಾಜನಾಗಿದ್ದ ವಿಕ್ರಮಾದಿ ತ್ಯನ ದಂಡನಾಯಕನಾದ ಅನಂತಪಾಲನು ಕೊಂಡಪಲ್ಲಿ ನಾಡಿನಲ್ಲಿ ರಾಜ್ಯ ವಾಳುತ್ತಿದ್ದು ಶ್ರೀಪತಿ ಪಂಡಿತರಿಂದ ಉಪದೇಶವನ್ನು ಹೊಂದಿದ್ದನೆಂತಲೂ, ಬೆಜವಾಡದ ಸಮೀಪದಲ್ಲಿರುವ ಚೇಬ್ರೋಲು ಶಾಸನದಿಂದ ತಿಳಿಯಬರುತ್ತದೆ.

೧೩ನೇ ಶತಮಾನದಲ್ಲಿ ಶ್ರೀಶೈಲ ರಾಷ್ಟ್ರವು ಹೊಯಿಸಳರ ಆಧೀನವಾಗಿ ದ್ದಿತೆಂತಲೂ, ಹೊಯಿಸಳರ ಪ್ರತಿನಿಧಿಯಾದ ನರಸರಾಜನು ಕ್ಷೇತ್ರದ

ಎಂಟು ದಿಕ್ಕುಗಳಲ್ಲಿಯೂ ಲಿಂಗಗಳನ್ನು ಸ್ಥಾಪಿಸಿದನೆಂತಲೂ ಈತನು ಅನೇಕ ದೀನರಿಗೆ ದಾನವನ್ನು ಮಾಡಿದನೆಂತಲೂ ಶಾಸನಗಳಿಂದ ತಿಳಿದುಬರುತ್ತದೆ.

ಕ್ರಿ.ಶ. ೧೧೫೦ ರಲ್ಲಿ ಕಲ್ಲುಕುರಿಕೆಯನ್ನಾಳುತ್ತಿದ್ದ ಮಲ್ಲರಸನು ಆಕಸ್ಮಿಕ ವಾಗಿ ಬಂದ ಓರ್ವ ಯಾಚಕನಿಂದ ಜ್ಞಾನೋಪದೇಶವನ್ನು ಪಡೆದು ವೈರಾಗ್ಯ ದಿಂದ ರಾಜ್ಯವನ್ನು ತೊರೆದು ಶ್ರೀಶೈಲವನ್ನು ಸೇರಿದನೆಂತಲೂ ಆತನ ಮಗನಾದ ಸಕಲೇಶಮಾದರಸನು ಸಹಾ ಶ್ರೀಶೈಲಕ್ಕೆ ಬಂದು ತಂದೆಯಂತೆ ತಾನೂ ವಿರಕ್ತ ನಾಗಲೆತ್ನಿಸಿದನೆಂತಲೂ, ಇದನ್ನು ನೋಡಿ ತಂದೆಯಾದ ಮಲ್ಲರಸನು ನಿನಗೆ ಪರಿಪಕ್ವ ಹೃದಯವು ಇನ್ನೂ ಹುಟ್ಟಿಲ್ಲ. ನೀನು ಕೆಲವು ಕಾಲ ಕಲ್ಯಾಣದಲ್ಲಿ ಬಸವಾದಿ ಪ್ರಮಥರ ಸಾಂಗತ್ಯದಲ್ಲಿರುವವನಾಗು. ನಂತರ ಅವರನ್ನೊಡಗೂಡಿ ಶಿವಸಾನಿಧ್ಯವನ್ನು ಸೇರುವವನಾನೆಂದು ಹೇಳಲು ತಂದೆಯ ಆಣತಿಯಂತೆ ನಡೆದುಕೊಂಡು ಧನ್ಯನಾದನು. ಈ ಸಕಲೇಶಮಾದರಸರ ಮಗನೇ ಮಾಯಿ ದೇವನು, ಶ್ರೀ ಮಲ್ಲರಸರು ಶ್ರೀಶೈಲದಲ್ಲೇ ಇದ್ದು ಶಿವಸನ್ನಿಧಿ ಸೇರಿದರೆಂದು ಶ್ರೀ ಯಳಂದನೂರು ಪಂಡಿತರು ತಮ್ಮ ವೃಷಭೇಂದ್ರ ವಿಜಯದಲ್ಲಿ ಬರದಿರು ವರು.

ಕ್ರಿ. ಶ. ೧೧೬೭ ರಲ್ಲಿ ಶಿವಶರಣ ಮಹಿಳೆಯರಲ್ಲಿ ಅಗ್ರಸ್ಥಾನವನ್ನು ಹೊಂದಿದ ಅಕ್ಕಮಹಾದೇವಿಯು ತನಗೆ ಬಲಾತ್ಕಾರವಾಗಿ ವಿವಾಹಮಾಡಲೆಳ ಸಿದ ವಿವಾಹವನ್ನು ಧಿಕ್ಕರಿಸಿ ಓರ್ವ ಸದ್ಗುರುವಿನ ಸದುಪದೇಶವನ್ನು ಹೊಂದಿ, ವಿರಾಗಿಣಿಯಾಗಿ ತನ್ನ ವಚನಸುಧಾ ಸೇಚನದಿಂದ ಕಲ್ಯಾಣದಲ್ಲಿದ್ದ ಶ್ರೀ ಅಲ್ಲ ಮಾಪ್ರಭು, ಬಸವೇಶ್ವರ, ಚನ್ನಬಸವೇಶ್ವರ ಮುಂತಾದ ಶಿವಶರಣರನ್ನು ಆನಂದ ಹೊಂದುವಂತೆಮಾಡಿ, ನಾನಾಕ್ಷೇತ್ರಗಳನ್ನು ಸಂಚರಿಸಿ, ಕೊನೆಗೆ ಶ್ರೀಶೈಲವನ್ನು ಸೇರಿದಳು. ಈ ವಿರಾಗಿಣಿಯ ಜನ್ಮಸ್ಥಲವು ಮೈಸೂರ ರಾಷ್ಟ್ರದ ಶಿವಮೊಗ್ಗೆಗೆ ಸೇರಿದ ಉಡುತಡಿಯೆಂಬ ಸ್ಥಲವೆಂತಲೂ ಧಾರವಾಡದ ಕರ್ಮವೀರ ಪತ್ರಿಕೆಯಲ್ಲಿ ಪ್ರಕಟಿಸಿರುವರು.

ಈ ಮಹಾದೇವಿಯು ತನ್ನ ನಾಮಧೇಯವನ್ನು ಅಖಂಡ ಭೂಮಂಡಲ ದಲ್ಲಿರುವ ಅನೇಕಾನೇಕ ಶಿವಭಕ್ತರ ಜಿಹ್ವಾಗ್ರದಲ್ಲಿ ನಟಿಸುವಂತೆಮಾಡಿ, ತನ್ನ ಚರಮದಶೆಯನ್ನು ಶ್ರೀಶೈಲದಲ್ಲೇ ಕಳೆದು ಕದಳೀವನವನ್ನು ಸೇರಿ, ತನ್ನ ಪ್ರತಿ

ಯೊಂದು ವಚನದಲ್ಲಿ ಶ್ರೀ ಚೆನ್ನಮಲ್ಲಿಕಾರ್ಜುನನೆಂಬ ಮಕುಟವನ್ನಿರಿಸಿ ಅಜ ರಾಮರ ಶರೀವನ್ನು ಹೊಂದಿರುವಳು.

ಕ್ರಿ. ಶ. ೧೧೬೦ ರಲ್ಲಿ ಅಲ್ಲಮಾಪ್ರಭುದೇವರು, ಬಸವಣ್ಣನ ದರ್ಶನಾ ನಂತರ ವೈರಾಗ್ಯಮೂರ್ತಿಯಾಗಿ, ಅನೇಕರಿಗೆ ಶಿವತತ್ವವನ್ನು ಬೋಧಿಸಿ, ತನ್ನನ್ನು ಮೋಹಿಸಿದ ಮಮಕಾರ ಭೂಪಾಲನ ಮಗಳಾದ ಮೋಹಿನೀದೇವಿ ಎಂಬ ಕನ್ಯೆಗೆ ಮೋಕ್ಷವನ್ನು ಕೊಟ್ಟು ಕದಳೀವನವನ್ನು ಸೇರಿ ಶಿವಸನ್ನಿಧಿಗೆ ಹೋದನೆಂತಲೂ ತಿಳಿದುಬಂದಿದೆ.

ಕ್ರಿ. ಶ. ೧೧೬೨ ರಲ್ಲಿ ಸೊನ್ನಲಾಪುರದ ಸಿದ್ಧರಾಮೇಶ್ವರನು, ತನ್ನ ಸೊಲ್ಲಾಪುರದ ಸಂಚರಾನಂತರ ಶ್ರೀಶೈಲವನ್ನು ಹೊಕ್ಕು ಶ್ರೀಸ್ವಾಮಿಯನ್ನು ಕುರಿತು ತಪಸ್ಸನ್ನಾಚರಿಸಿ, ಮೋಕ್ಷಕ್ಕೆ ತೆರಳಿದನಂತೆ.

ಕ್ರಿ. ಶ. ೧೧೬೪ ರಲ್ಲಿ ಮೋಳಿಗೆಯಮಾರಯ್ಯನು ತನ್ನ ಧರ್ಮಪತ್ನಿ ಯಾದ ಮಹಾದೇವಿಯೊಂದಿಗೆ ಶ್ರೀಶೈಲವನ್ನು ಸೇರಿ ಅಲ್ಲಿ ನಿಷ್ಕಳಂಕ ಮಲ್ಲಿ ಕಾರ್ಜುನನೆಂಬ ನಾಮಧ್ಯೇಯದಿಂದ ವಚನಗಳನ್ನು ಹಾಡಿ ಧನ್ಯನಾದನಂತೆ.

ಕ್ರಿ. ಶ ೧೧೬೮ ರಲ್ಲಿ ಮೈದುನ ರಾಮಯ್ಯನೆಂಬ ಆಂಧ್ರ ದೇಶದ ಶರ ಣನು ತನ್ನ ಮನೆಯ ದೀಪಾವಳಿ ಹಬ್ಬಕ್ಕೆ ನಿಜವಾದ ಅಕ್ಕ-ಭಾವಂದಿರ ಸಮೇತ ಶ್ರೀಶೈಲಕ್ಕೆ ಹೊರಟು ಶ್ರೀ ಮಲ್ಲಿಕಾರ್ಜುನನನ್ನು, ಶ್ರೀ ಭ್ರಮರಾಂಬೆಯನ್ನು ತನ್ನ ಮನೆಗೆ ಕರೆದುತಂದು ದೀಪಾವಳಿ ವ್ರತವನ್ನು ಮಾಡಿದನಂತೆ.

ಕ್ರಿ. ಶ. ೧೧೭೨ ರಲ್ಲಿ ಪ್ರಸಾದಿ ಭೋಗಣ್ಣನೆಂಬ ಶಿವಶರಣನು ಶ್ರೀಶೈಲ ಪರ್ವತದಲ್ಲಿ ಕೆಲವುಕಾಲವಿದ್ದು, ಮನದಣಿಯುವಂತೆ ಪೂಜಿಸಿ, ಕೆಲವು ಕನ್ನಡ ವಚನಗಳನ್ನು ಬರೆದಿರುವನಂತೆ.

ಕ್ರಿ. ಶ. ೧೨ ನೇ ಶತಮಾನದಲ್ಲಿ ಶಿವಲೆಕ ಮಂಚಣ್ಣನು ಶ್ರೀಶೈಲದಲ್ಲಿ ಶ್ರೀ ವಿನಾಯಕನಿಗೆ ತನ್ನ ಹತ್ತು ಬೆರಳುಗಳನ್ನು ಕತ್ತರಿಸಿ ಅರ್ಪಿಸಿ, ಪುನಃ ಪ್ರಾರ್ಥನೆಯಿಂದ ಪಡೆದು ಶ್ರೀ ಮಲ್ಲಿಕಾರ್ಜುನನ ಅಂಕಿತದಿಂದ ವಚನಗಳನ್ನು ಬರೆದಿರುವನು.

ಕ್ರಿ. ಶ. ೧೨ ನೇ ಶತಮಾನದಲ್ಲಿ ಶಿವಶರಣನಾದ ಪಂಡಿತಾರಾಧ್ಯನು ಶ್ರೀ ಮಲ್ಲಿಕಾರ್ಜುನನ ವರದಿಂದ ಹುಟ್ಟಿದ ತನ್ನ ಮಗನಿಗೆ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯನೆಂಬ ಹೆಸರನ್ನಿಟ್ಟು ಮಹಾಸ್ವಾಮಿಯನ್ನು ಕುರಿತು ದೀರ್ಘ ಕಾಲ ತಪಸ್ಸನ್ನಾಚರಿಸಿದನೆಂತಲೂ, ಉಲ್ಲೇಖವಿದೆ.

ಇವರ ಮಕ್ಕಳಾದ ಶ್ರೀಮಲ್ಲಿಕಾರ್ಜುನ ಪಂಡಿತಾರಾಧ್ಯರು ಅನೇಕ ಪರ ವಾದಿಗಳನ್ನು ಜೈಸಿದರೆಂತಲೂ ಚೋಳದೇಶದ ಜೈನರಾಜನ ಆಸ್ಥಾನ ಪಂಡಿತ ರಾಗಿದ್ದರೆಂತಲೂ ಈತನು ಪರವಾದಿಗಳನ್ನು ಧ್ವಂಸಮಾಡಿದ ಕ್ರೂರನೆಂದು ರಾಜನು ಕಣ್ಣುಗಳನ್ನು ಕೀಳಿಸಲು ಚಿಂತಾಕ್ರಾಂತನಾಗಿ ಶ್ರೀಶೈಲವನ್ನು ಸೇರಿ ತಪವಂ ಮಾಡಿ ಮರಳಿ ಕಣ್ಣುಗಳನ್ನು ಪಡೆದನೆಂತಲೂ ಅನೇಕ ವೀರಶೈವ ಮತ ಗ್ರಂಥಗಳನ್ನು ಬರೆದನೆಂತಲೂ ಶಾಸನವಿದೆ.

ಕ್ರಿ. ಶ. ೧೧೯೫ ರಲ್ಲಿ ಪಾಲ್ಕುರಿಕಿ ಸೋಮನಾರಾಧ್ಯರು ಆಂಧ್ರ ಕರ್ನಾಟಕ ದೇಶದಲ್ಲಿ ಸ.ಪ್ರಸಿದ್ಧ ಕವಿಯಾಗಿ ಮಹಾಶಿವಶರಣರಾದ ಪಂಡಿತಾ ರಾಧ್ಯರ ಚರಿತ್ರೆಯನ್ನು ಆಂಧ್ರಭಾಷೆಯಲ್ಲಿ ದ್ವಿಪದರೂಪವಾಗಿ ಬರೆಯುತ್ತಾ ಅದರಲ್ಲಿ ಶ್ರೀಶೈಲ ವರ್ಣನೆಯನ್ನತ್ಯಂತ ಭಕ್ತಿರಸೋಪೇತವಾಗಿ ವರ್ಣಿಸಿರು ವರು. ಇವರ ಗ್ರಂಥವನ್ನು ಆಂಧ್ರದೇಶದ ಅನಂತಪುರದ ಕಾಳಾಶಾಲೆಯ ಆಂಧ್ರ ಪಂಡಿತರಾಗಿದ್ದ ಡಾ. ಚಿಲುಕೂರು ನಾರಾಯಣರಾಯರೆನ್ನುವ ವಿಮರ್ಶಕಾಗ್ರೇಸರರು ನೋಡಿ ಅತ್ಯುತ್ತಮ ಗ್ರಂಥವೆಂದು ಭಾವಿಸಿ ಆ ಗ್ರಂಥಕ್ಕೆ ಪೀಠಿಕಾರೂಪವಾಗಿ (೩೦೦) ಮೂರುನೂರು ಪೇಜುಗಳು ಬರೆದಿರುವರೆಂದರೆ ಆ ಗ್ರಂಥದ ರಸವತ್ವವಿಶೆಯು ಅಷ್ಟಿಷ್ಟೆಂದು ಹೇಳಲಾಗುವಂತಿಲ್ಲ.

೧೩ ನೇ ಶತಮಾನದಲ್ಲಿ ಶಾಂತಲಿಂಗಯ್ಯನೆಂಬ ರಾಜನು ಜೈನರನ್ನನೇ ಕರನ್ನು ಸದೆಬಡಿದು ಶ್ರೀಶೈಲಕ್ಕೆ ಬಂದು ಶ್ರೀಶೈಲದಲ್ಲಿ ಸ್ವಾಮಿಯ ರಥವನ್ನು ಕಟ್ಟಿಸಿ ಮತ್ತು ಒಂದು ಕೆರೆಯನ್ನು ಕಟ್ಟಿಸಿ, ಕಾಲುವೆಗಳನ್ನು ತೋಡಿಸಿ, ದೇವಾಲಯದ ಬಾಗಿಲುಗಳಿಗೆ ಬಂಗಾರದ ತಗಡುಗಳನ್ನು ಕೆತ್ತಿಸಿ, ಶಿಖರ ಗಳನ್ನು ನಿರ್ಮಿಸಿ, ಅನೇಕರಿಗೆ ದಾನ-ಧರ್ಮಾದಿಗಳನ್ನು ಮಾಡಿ ಜಮೀನುಗಳ ನ್ನಿತ್ತು ಶ್ರೀ ಸ್ವಾಮಿಯ ಅನುಗ್ರಹಕ್ಕೆ ಪಾತ್ರನಾದನೆಂತಲೂ, ಶಾಸನವಿದೆ.

೧೪ನೇ ಶತಮಾನದಲ್ಲಿ ಆಂಧ್ರಪ್ರದೇಶದ ಕಾಕತೀಯ ಪ್ರಭುವಾದ ಪ್ರತಾಪರುದ್ರ ಗಜಪತಿಯ ಕಾಲಕ್ಕೆ ಶ್ರೀಶೈಲವು ಆತನ ಆಧೀನದಲ್ಲಿದ್ದಿತೆಂತಲೂ ಆ ಕಾಲದಲ್ಲಿ ಅಮಿತೈಶ್ವರ್ಯದಿಂದ ಮೆರೆಯುತ್ತಿದ್ದಿತೆಂತಲೂ, ಆ ಅರಸನ ಕಾಲದಲ್ಲಿಯೇ ಶ್ರೀ ಮಲ್ಲಿಕಾರ್ಜುನ ಸ್ವಾಮಿಗೆ ೬೦ ಹಳ್ಳಿ ಜಹಗೀರುಗಳೂ, ಹಲವು ಭೂಮಿಗಳೂ, ವಜ್ರ-ವೈಡೂರ್ಯಾದಿ ಆಭರಣಗಳು ಇದ್ದವೆಂತಲೂ, ಇದರಿಂದ ಬಂದ ಆದಾಯವನ್ನು ಜೀರ್ಣೋದ್ಧಾರ, ಅನ್ನಛತ್ರ ಮುಂತಾದ ಧರ್ಮಕಾರ್ಯಗಳಿಗೆ, ವೀರಸಿದ್ಧ ಭಿಕ್ಷಾವರ್ತಿ ಸ್ವಾಮಿಗಳವರ ಮೇಲ್ವಿಚಾರಣೆಯಿಂದ ನಡೆಯುತ್ತಿದ್ದಿತು.

೧೪ ನೇ ಶತಮಾನದ ಆದಿಭಾಗದಲ್ಲಿ ರೆಡ್ಡಿವಂಶದ ರಾಜನಾದ ವೇಮಾರೆಡ್ಡಿಯು ಪಾತಾಳಗಂಗೆಯ ಸೋಪಾನಗಳನ್ನು ಜೀರ್ಣೋದ್ಧಾರಮಾಡಿಸಿದನೆಂತಲೂ ಶಿವಾಚಾರ್ಯರಿಂದ ಶಿವದೀಕ್ಷೆಯನ್ನು ಹೊಂದಿದನೆಂತಲೂ ಮುಂದೆ ಇವರ ವಂಶಸ್ಥರು ಸಭಾಮಂಟಪವನ್ನು, ಬೇಳೆಬಸವೇಶ್ವರ ಮಂಟಪಗಳನ್ನು ಕಟ್ಟಿಸಿ, ದಾನಧರ್ಮಗಳನ್ನು ಮಾಡಿದರು.

೧೪ ನೇ ಶತಮಾನದ ಅಂತ್ಯದಲ್ಲಿ ಪಾತಾಳಗಂಗೆಯಲ್ಲಿದ್ದ ಮಂಟಪಗಳು ಜೀರ್ಣವಾದ ವೇಳೆಯಲ್ಲಿ ಕದಂಬ ರಾಜರ ಮಗಳಾದ ವಿಠಲಾಂಬೆಯು ಕೆಲಕಾಲ ಶ್ರೀಶೈಲದಲ್ಲಿದ್ದು, ಜೀರ್ಣೋದ್ಧಾರಮಾಡಿ. ನೂತನವಾಗಿ ಕೆಲವು ಮಂಟಪಗಳನ್ನು ಕಟ್ಟಿಸಿ ಶ್ರೀಮಲ್ಲಿಕಾರ್ಜುನನಿಗೂ, ಶ್ರೀಭ್ರಮರಾಂಬೆಗೂ ಹಲವು ರತ್ನಾಭರಣಗಳನ್ನಿತ್ತು ಹೋದಳು.

ಇದೇ ೧೪ನೇ ಶತಮಾನದ ಕೊನೆಯ ಭಾಗದಲ್ಲಿ ಕೊಟ್ಟೂರು ಗುರುಬಸವೇಶ್ವರನು ಶ್ರೀಶೈಲಕ್ಕೆ ಬಂದು ಕೆಲಕಾಲದಲ್ಲಿ ಯೋಗಾಭ್ಯಾಸಮಾಡಿ ಕದಳೀ ವನವನ್ನು ಹೊಕ್ಕು ಕೆಲವು ಶಿಷ್ಯರೊಂದಿಗೆ ಕೊಟ್ಟೂರಿಗೆ ಬಂದನೆಂದು ಆ ಮಹನೀಯನ ಚರಿತ್ರೆಯಲ್ಲಿ ಇರುತ್ತದೆ.

ಕ್ರಿ. ಶ. ೧೪೦೫ ರಲ್ಲಿ ಕನ್ನಡ ರಾಜ್ಯದ ಸೌರ್ವಭೌಮರಾದ ವಿಜಯನಗರದರಸರಲ್ಲಿ ಎರಡನೆಯ ಹರಿಹರರಾಯನು ಸಮಸ್ತ ಶಿಥಿಲಗಳನ್ನು ಉದ್ಧರಿಸಿದನು. ಮುಖಮಂಟಪವನ್ನು ಕಟ್ಟಿಸಿರುವನು.

ಕ್ರಿ. ಶ ೧೪೩೦ ರಲ್ಲಿ ಇದೇ ವಿಜಯನಗರದ ರಾಜವಂಶಸ್ಥನಾದ ವೀರ ಪ್ರತಾಪ ಪ್ರೌಢರಾಯನು ಕುಟುಂಬ ಸಮೇತ ಮಿತಪರಿವಾರದೊಂದಿಗೆ ಬಂದು ಕೆಲದಿನವಲ್ಲಿದ್ದು ಲಿಂಗಾಲಯಗಳನ್ನು, ಮಹಲುಗಳನ್ನು ಕಟ್ಟಿಸಿದನು.

ಕ್ರಿ. ಶ. ೧೪೫೫ ರಲ್ಲಿ ಉಮ್ಮತ್ತೂರುರಾಜರ ಆಸ್ಥಾನಪಂಡಿತರಾದ ಶ್ರೀಶಂಕರಾಚಾರ್ಯರು ಶ್ರೀಶೈಲಕ್ಕೆ ಬಂದು ಪಾಲ್ಕುರಿಕಿ ಸೋಮನಾರಾಧ್ಯರು ರಚಿಸಿದ ಆಂಧ್ರಪಂಡಿತಾರಾಧ್ಯ ಚರಿತ್ರೆಯನ್ನು ಕನ್ನಡದಲ್ಲಿ ರಚಿಸಿದನು.

೧೫ ನೇ ಶತಮಾನದ ಅಂತ್ಯದಲ್ಲಿ ಶ್ರೀಶೈಲ ರಾಜ್ಯವನ್ನು ಸಾಳ್ವವಂಶದ ರಾಜರು ಶ್ರೀಶೈಲದ ನೀರಿನ ಝುರಿಗಳನ್ನು ಕೊಳಗಳನ್ನಾಗಿ ನಿರ್ಮಿಸಿದರೆಂತಲೂ ದೇವಾಲಯದ ಸುತ್ತಲೂ ಹಾಸು ಬಂಡೆಗಳನ್ನು ಹೊಂದಿಸಿದರು.

ಕ್ರಿ. ಶ. ೧೫೦೦ ರಲ್ಲಿ ಶ್ರೀ ಮನ್ನಿಜಗುಣ ಶಿವಯೋಗಿಗಳು ವೈರಾಗ್ಯ ಶೀಲರಾಗಿ ಈ ಶ್ರೀಶೈಲದಲ್ಲಿ ಸಹಾ ಸಂಚರಿಸಿದರು.

೧೬ ನೇ ಶತಮಾನದ ಪ್ರಥಮದಲ್ಲಿ ವಿಜಯನಗರದ ಅರಸನಾಗಿದ್ದ ಶ್ರೀಕೃಷ್ಣದೇವರಾಯನು ಅನೇಕ ದೇಶಗಳನ್ನು ಜಯಿಸುವ ಕಾಲಕ್ಕೆ ಶ್ರೀಶೈಲ ಪ್ರಾಂತವನ್ನು ಜೈಸಿದನೆಂತಲೂ, ತೇರಿನ ಬೀದಿ ಮುಂತಾದವುಗಳನ್ನು ನಿರ್ಮಿಸಿದನೆಂತಲೂ, ಅನ್ನಛತ್ರವನ್ನಿರಿಸಿದನು.

ಇದೇ ೧೬ನೇ ಶತಮಾನದಲ್ಲಿ ಶ್ರೀಕೃಷ್ಣದೇವರಾಯನ ಪ್ರತಿನಿಧಿಯಾದ ಶ್ರೀ ಚಂದ್ರಶೇಖರರಾಯನು ಮಲ್ಲಿಕಾರ್ಜುನನ ಗರ್ಭಾಲಯಕ್ಕೆ ಬಂಗಾರದ ತಗಡುಗಳನ್ನು ಹೊಂದಿಸಿ, ಕಲ್ಯಾಣಮಂಟಪವನ್ನು ಕಟ್ಟಿಸಿದನು.

ಈ ಚಂದ್ರಶೇಖರರಾಯನ ಕಾಲದಲ್ಲಿಯೇ ಹಲವು ರಾಜರು ಶ್ರೀಶೈಲಕ್ಕೆ ಬಂದಿದ್ದು ಶಾಂತಲಿಂಗನೇ ಮುಂತಾದವರು ಮಹಾಸ್ವಾಮಿಗೆ ಬಂಗಾರದ ಕವಚ ಗಳನ್ನು, ಮುಖವಾಡಗಳನ್ನು ಮಾಡಿಸಿದರೆಂತಲೂ ತಿಳಿದುಬರುತ್ತದೆ.

ಮುಖ್ಯವಾಗಿ ಯೋಚಿಸಿದರೆ ೧೫–೧೬ ನೇ ಶತಮಾನದಲ್ಲಿ ಶ್ರೀಶೈಲ ಪ್ರಾಂತವೂ, ರಾಷ್ಟ್ರವೂ ಅತ್ಯುನ್ನತಿ ಹೊಂದಿದ್ದಿತೆಂತಲೂ ನಿಶ್ಚಯಿಸಬಹುದಾ ಗಿದೆ. ಇದನ್ನೆಲ್ಲವೂ ತಿಳಿದು ರೋಹಿಲ್ಲರು ಬಂದು ಕ್ಷೇತ್ರವನ್ನು ಲೂಟಿಮಾಡ ಲುಜ್ಜುಗಿಸಿದರೆಂತಲೂ, ಆಗ ಮಹಾಬಲವಂತರಾದ ಕಾಡುಚೆಂಚರು ರೋಹಿಲ್ಲ ರನ್ನು ಸದೆಬಡಿದು ಓಡಿಸಿದರೆಂತಲೂ ಗೊತ್ತಾಗುತ್ತದೆ.

ಕ್ರಿ. ಶ. ೧೫೩೫ ರಲ್ಲಿ ಓದುವಗಿರಿಯಯ್ಯನೆಂಬ ವೀರಶೈವ ಕವಿ ಶ್ರೀಶೈಲ ಮಲ್ಲಿಕಾರ್ಜುನನಲ್ಲಿ ನಿಂದು ತನ್ನ ಗ್ರಂಥದ ಪ್ರತಿಯೊಂದು ಪ್ರಾರಂಭ ಶ್ಲೋಕ ವನ್ನು ಶ್ರೀಶೈಲ ಮಲ್ಲಿಕಾರ್ಜುನನೆಂಬ ಅಂಕಿತದಿಂದಲೇ ಬರೆದು ಸ್ತುತಿಸಿರು ವನು.

ಕ್ರಿ. ಶ. ೧೫೫೦ ರಲ್ಲಿ ವೀರಶೈವ ಕರ್ನಾಟಕ ಕವಿಯಾದ ಸಿರಿನಾಮಧೇ ಯನು ಶ್ರೀಗಿರಿ ಮಲ್ಲಿಕಾರ್ಜುನಾ ಎಂಬ ಶತಕವನ್ನು ಶ್ರೀಶೈಲದಲ್ಲಿದ್ದು ಕೊಂಡೇ ಬರೆದಿರುವನು.

ಕ್ರಿ. ಶ, ೧೬ ರಲ್ಲಿ ರಾಮಚಂದ್ರ ಶರ್ಮನೆಂಬ ಬ್ರಾಹ್ಮಣ ಕವಿಯು ಶ್ರೀಶೈಲದಲ್ಲಿದ್ದುಕೊಂಡೇ ಸ್ತುತಿರೂಪವಾದ ಶತಕವನ್ನು ಬರೆದಿರುವನು.

ಈ ಶ್ರೀಶೈಲ ಸಾಮ್ರಾಜ್ಯವು ೧೬ ನೇ ಶತಮಾನದವರೆಗೂ ವಿಜಯನಗರ ದರಸರ ಸ್ವಾಧೀನದಲ್ಲಿದ್ದು, ಅನಂತರ ತದ್ವಂಶಜನಾದ ರಾಮರಾಯನ ಕಾಲದಲ್ಲಿ ಹೀನಸ್ಥಿತಿಗೆಬಂದು ಕಳ್ಳರುಕಾಕರು, ಮುಂತಾದ ಸ್ವಾರ್ಥಿಗಳಿಗಾಕರವಾಯಿತು.

ಕ್ರಿ. ಶ. ೧೬ ನೇ ಶತಮಾನದ ಮಧ್ಯಕಾಲದಲ್ಲಿ ಗುಂಟೂರು, ಕಡಪ ಪ್ರಾಂತದ ವರ್ತಕರಿಂದ ಜೀರ್ಣೋದ್ಧಾರವಾಯಿತು.

ಕ್ರಿ. ಶ. ೧೬೭೪ ರಲ್ಲಿ ಶಿವಾಜಿಮಹಾರಾಜನು ಶ್ರೀಶೈಲಕ್ಕೆ ಬಂದು ಅನೇಕ ದೇವಾಲಯಗಳನ್ನು, ಭ್ರಮರಾಂಬಿಕಾ ದೇವಿಯವರಿಗೂ, ಶ್ರೀಶೈಲ ಮಲ್ಲಿಕಾರ್ಜುನನಿಗೂ ಕಟ್ಟಿಸಿದನೆಂತಲೂ ತಿಳಿದುಬಂದಿದೆ, (ಈ ವಿಷಯ ಹಿಂದಣ ಪುಟಗಳಲ್ಲಿಯೇ ವಿವರಿಸಿರುವೆನು)

ಕ್ರಿ. ಶ. ೧೭೯೪ ರಲ್ಲಿ ಮೈಸೂರರಸರಾಗಿದ್ದ ಶ್ರೀಕೃಷ್ಣರಾಜ ಒಡೆಯ ರವರು ಶ್ರೀಶೈಲಕ್ಕೆ ಬಂದು ಅಲ್ಲಿಯ ಮಹಿಮಾವಳಿಗಳನ್ನು ಗ್ರಂಥರೂಪವಾಗಿ ಬರೆದುದಲ್ಲದೇ ಅನೇಕ ದೀನನಾಥರಿಗೆ ಸಹಾಯಮಾಡಿ, ಮಹಾಸ್ವಾಮಿ ಗೊಂದು ಬೆಲೆಯುಳ್ಳ ರತ್ನಾಭರಣ ಅರ್ಪಿಸಿರುವರು.

ಕ್ರಿ. ಶ. ೧೭೯೪ ರಲ್ಲಿ ಕ್ಯಾಪ್ಟನ್ ಕೊಲಿನಾಮೆಕಂಜಿಯವರು ಶ್ರೀಶೈ ಲಕ್ಕೆ ಬಂದು ಅಲ್ಲಿ ಕೆಲವು ಕಾಲವಿದ್ದು, ೧೭೯೮ ರಲ್ಲಿ ತಮ್ಮ ರಿಪೋರ್ಟಿನಲ್ಲಿ ಶ್ರೀಶೈಲದ ಗತವೈಭವವನ್ನು ಕುರಿತು ಬರೆಯುತ್ತಾ ಶ್ರೀಶೈಲವು ತುಂಬಾ ಮನೋಹರವಾದ ದೇವಸ್ಥಾನವೆಂತಲೂ, ಇದು ಸರಿಯಾದ ಧರ್ಮಾಧಿಕಾರಿಗ

ಳಿಲ್ಲದೆ ಕ್ಷೀಣವಾಗಿರುವದೆಂತಲೂ, ಇಲ್ಲಿರುವ ಸ್ವಾಮಿಯ ಬೆಲೆಯುಳ್ಳ ಆಭರಣಗಳನ್ನು ಆತ್ಮಕೂರು ಮುಂತಾದ ಗ್ರಾಮಗಳಲ್ಲಿ ಮಾರಿರುವರೆಂತಲೂ ಕೆಲವು ಎರಕದ ಸಾಮಾನುಗಳನ್ನು ಮದ್ರಾಸು ಸರ್ಕಾರದವರು ವಸ್ತುಪ್ರದರ್ಶನಾಲಯದಲ್ಲಿರಿಸಿರುವರೆಂತಲೂ ತಿಳಿಸಿದ್ದಾರೆ.

## ಮುಖಮಂಟಪ

ಈ ಮಂಟಪವು ಶ್ರೀಶೈಲ ಮಲ್ಲೇಶ್ವರನ ಪೂರ್ವದಿಕ್ಕಿನ ದೊಡ್ಡ ಬಾಗಿಲು ಸಮೀಪದಲ್ಲಿ ೧೫ ಅಡಿಗಳ ದೂರದಲ್ಲಿರುವದು ಇದನ್ನು ಶ್ರೀ ವಿಜಯನಗರದ ರಾಜನಾಗಿದ್ದ ಎರಡನೆಯ ಹರಿಹರನು ಕಟ್ಟಿಸಿದ್ದನೆಂತಲೂ, ಲಿಪಿಗಳು ಸಹಾಯಿರುವವೆಂತಲೂ, ಪೂ. ಪ. ಈ ಕಟ್ಟಡವು ೩೮॥ ಅಡಿಗಳ ಉದ್ದ, ಉ. ದ. ೩೮॥ ಅಡಿಗಳ ಅಗಲವೂ ಆಗಿದೆ. ಇದು ಯಾತ್ರಿಕರಿಗೆ ಸೌಕರ್ಯವಾಗಿದೆ.

## ಬೇಳೆಬಸವೇಶ್ವರ

ಇದು ದೊಡ್ಡ ನಂದಿವಿಗ್ರಹ. ಮೇಲಣ ಮಂಟಪಕ್ಕೆ ೧೫ ಅಡಿಗಳ ದೂರದಲ್ಲಿದೆ. ಕೆಂಪು ಶಿಲೆಯಲ್ಲಿ ಕೆತ್ತಿ ಲಿಂಗದ ಮುಂಗಡೆ ೬ ಅಡಿ ಎತ್ತರ ೮ ಅಡಿ ಉದ್ದವಾಗಿ, ೪॥ ಅಡಿ ಅಗಲವಾಗಿ ಒಂದು ಅಂಕಣದ ತುಂಬಾ ತುಂಬಿಕೊಂಡಿದೆ. ತೈಲಸ್ನಾನ ಮಾಡಿಸುವದರಿಂದ ನುಣುಪಾಗಿ ಕಪ್ಪಾಗಿ ಕಾಣಿಸುತ್ತದೆ. ಯಾತ್ರಿಕರು ಕಡಲೆಬೇಳೆಯನ್ನು ಅರಿಸಿನ ಬಟ್ಟೆಯಲ್ಲಿ ಕಟ್ಟಿ ನಂದಿಯ ಬಾಯಿಗೆ ಕಟ್ಟುವದರಿಂದ ಈ ಹೆಸರು ಬಂದಿರುವದೆಂದು ಹೇಳುತ್ತಾರೆ. ಶ್ರೀಶೈಲದಲ್ಲಿ ಇದೇ ದೊಡ್ಡ ವಿಗ್ರಹ. ಇದನ್ನು ವೀರಶೈವರು ಪೂಜಿಸುತ್ತಾರೆ.

## ರಾಜರಾಜೇಶ್ವರಿ ಮತ್ತು ಅಮೃತಲಿಂಗ

೧೭ ನೇ ಸತಮಾನದಲ್ಲಿ ಆಂಧ್ರಪ್ರಾಂತದ ವೈಶ್ಯಮಹನಿಯರೋರ್ವರು ಬೇಳೆಬಸವೇಶ್ವರನ ಮಂಟಪಕ್ಕೆ ೫೦ ಅಡಿಗಳ ದೂರದಲ್ಲಿ ಒಂದು ಲಿಂಗವನ್ನು ಪ್ರತಿಷ್ಠೆಮಾಡಿಸಿ ಅಮೃತಲಿಂಗವೆಂತಲೂ, ಲಿಂಗದ ಎಡಭಾಗದ ಚಿಕ್ಕ ಗರ್ಭಾಲಯದಲ್ಲಿ ಶ್ರೀ ರಾಜರಾಜೇಶ್ವರಿಯೆಂಬ ಹೆಸರಿನ ಒಂದು ಪಾರ್ವತಿ ವಿಗ್ರಹವನ್ನು ಸ್ಥಾಪಿಸಿರುವರು. ಈ ಮೂರ್ತಿಗಳನ್ನು ಬ್ರಾಹ್ಮಣರು ಪೂಜಿಸುತ್ತಿರುವರು.

## ಶಿವಶಿದ್ದೇಶ್ವರ ಮಠ

ರಾಜರಾಜೇಶ್ವರಿ ದೇವಾಲಯದ ಬಲಗಡೆಯ ಈಶಾನ್ಯ ಭಾಗದಲ್ಲಿ ರುವದು. ಇದರಲ್ಲಿ ಮೂರು ಕೋಣೆಗಳಿವೆ. ಅಲ್ಲಿ ಬಿಲ್ವ ಮತ್ತು ಬನ್ನಿಗಿಡ ಗಳಿವೆ. ಇಲ್ಲಿ ಯಾತ್ರಿಕರಿಗನುಕೂಲವಾಗಿದೆ.

## ವಸಂತ ಮಂಟಪ

ಇದನ್ನು ೧೭ ನೇ ಶತಮಾನದಲ್ಲಿ ಶೃಂಗಾರವಾಗಿ ಕಟ್ಟಿಸಿದನು. ಜಾತ್ರೆಯ ಕಾಲದಲ್ಲಿ ವಸಂತೋತ್ಸವ ಮಾಡುತ್ತಾರೆ. ಇದು ವಿಶಾಲ ಮತ್ತು ಮನೋಹರವಾಗಿದೆ.

## ಮಲ್ಲಿಕಾಕುಂಡ

೧೬ ನೇ ಶತಮಾನದಲ್ಲಿ ವಿಜಯನಗರದ ರಾಜರಿಂದ ನಿರ್ಮಾಣ ವಾಗಿದೆ. ಇಲ್ಲಿ ತೆಪ್ಪೋತ್ಸವ ನಡೆಯುತ್ತದೆ. ಇಲ್ಲಿ ವೀರಶೈವರ ಅನ್ನಛತ್ರವನ್ನು ಕರ್ನೂಲು ಬಾ। ನರಸಪ್ಪನವರೆಂಬ ಗೃಹಸ್ಥರೂ ನಡೆಯಿಸುತ್ತಾರೆ. ಇದು ಚಿಕ್ಕದು ಆದರೆ ಅತಿ ರಮ್ಯವಾದುದಾಗಿದೆ.

## ಪಂಚನಂದಿ ಉಮಾ-ಮಹೇಶ್ವರ

ಈ ನಂದಿವಿಗ್ರಹವು ಒಂದೇ ಕಲ್ಲಿನಲ್ಲಿ ಕೆತ್ತಲ್ಪಟ್ಟದೆ. ಈ ವಿಗ್ರಹವು ೩೮ ಅಂಗುಲ ಎತ್ತರ, ೨೦ ಅಂಗುಲ ಅಗಲವಾಗಿ ಇರುವವು ಸದ್ಯ. ಈ ವಿಗ್ರಹಕ್ಕೆ ಅರ್ಚನೆ ಮುಂತಾದವುಗಳಿಲ್ಲ.

## ಮುದಿಮಲ್ಲಿಕಾರ್ಜುನ ಲಿಂಗ

ಇದು ಮಲ್ಲಿಕಾರ್ಜುನ ದೇವಾಲಯಕ್ಕೆ ಉತ್ತರ ದಿಗ್ಭಾಗದಲ್ಲಿ ಅತ್ಯಂತ ಪುರಾತನ ಲಿಂಗವಾಗಿ ೫॥ ಅಡಿ ಸುತ್ತಳತೆ, ೨। ಅಡಿಗಳ ಎತ್ತರವುಳ್ಳದಾಗಿರು ತ್ತದೆ. ಬಹುಕಾಲದ ಲಿಂಗವಾದುದರಿಂದ ಡೊಂಕುಡೊಂಕಾಗಿ ಲಿಂಗದಮೇಲೆ ರಂಧ್ರಗಳು ಬಿದ್ದಿರುವವು. ಇಲ್ಲಿಯೇ ಚಂದ್ರಾವತಿಗೆ ಶಿವನು ಪ್ರತ್ಯಕ್ಷನಾಗಿ ಭ್ರಮರಾಂಬಾ ಪದವಿಯನ್ನು ಕೊಟ್ಟನೆಂತಲೂ, ಇಲ್ಲಿ ವೀರಶೈವರೇ ಅರ್ಚಕ ರಾಗಿರುವರೆಂತಲೂ ತಿಳಿದಿದೆ.

## ಹತ್ತಿಯಮರ, ಅದರ ಜಗಲಿ

ಈ ಮರವು ವಿಶಾಲವಾಗಿಯೂ ಹೆಚ್ಚಾದ ನೆರಳುಳ್ಳದ್ದಾಗಿ, ೧೭ ನೇ ಶತಮಾನದಲ್ಲಿ ಕಟ್ಟಿಸಿದುದಾಗಿ ೪೪ ಅಡಿಗಳ ಸುತ್ತಳತೆಯುಳ್ಳದ್ದಾಗಿ, ಉಗಾದಿ ಉತ್ಸವಕ್ಕೆ ಬರುವ ಕಂಬಿಯ ಗಣಾಚಾರಿಗಳಿಗೆ ಆಶ್ರಯವಾಗಿ ದಂಗೇಕೋರರಿಂದ ಹತವಾದ ವಿಗ್ರಹಗಳಿಂದ ಕೂಡಿಕೊಂಡಿರುವದು.

## ಬಲಿಪೀಠ

ಈ ಪೀಠವು ಮುದಿಮಲ್ಲಿಕಾರ್ಜುನನ ದೇವಾಲಯದ ಪಶ್ಚಿಮ ದಿಕ್ಕಿನಲ್ಲಿರುವದು. ಇದು ೭॥ ಅಡಿ ಎತ್ತರ, ೫॥ ಅಡಿ ಅಗಲ, ೫೩ ಅಡಿ ಉದ್ದವಾಗಿದೆ. ಇದನ್ನು ೧೭ನೇ ಶತಮಾನದಲ್ಲಿ ಓರ್ವ ವೈಶ್ಯ ಶ್ರೀಮಂತನು ಸ್ಥಾಪಿಸಿರುವನು.

## ವೀರಭದ್ರ ದೇವರು

ಇದು ಮಲ್ಲೇಶ್ವರನ ಉತ್ತರದಿಕ್ಕಿನಲ್ಲಿದೆ. ೬॥ ಅಡಿ ಎತ್ತರವಾಗಿ, ೩ ಅಡಿ ಅಗಲವಾಗಿರುವದು. ಇದು ಭಿನ್ನವಾಗಿದೆ. ಇದನ್ನು ಪುಣ್ಯಾತ್ಮರಾದವರು ಪುನಃ ನಿರ್ಮಿಸಿ ಸ್ಥಾಪಿಸಬೇಕಾಗಿ ಲೇಖಕನ ವಿನಂತಿ.

## ಅರ್ಧನಾರೀಶ್ವರ

ಇದು ಮೇಲಣ ದೇವಸ್ಥಾನಕ್ಕೆ ಪಶ್ಚಿಮ ದಿಕ್ಕಿನಲ್ಲಿರುವದು. ೪೩ ಅಡಿ ಎತ್ತರ, ೨ ಅಡಿ ಅಗಲವಾಗಿದೆ. ೧೪ ನೇ ಶತಮಾನದಲ್ಲಿ ಕದಂಬರಾಜರು ಸ್ಥಾಪಿಸಿರುವರು. ಇದು ಹೆಸರಿಗೆ ತಕ್ಕಂತೆ ಅರ್ಧ ಪುರುಷ, ಸ್ತ್ರೀ ಆಕಾರವಾಗಿರುವದು.

## ಪಂಚಪಾಂಡವ ಲಿಂಗಗಳು

ಪಾಂಡವರು ತಮ್ಮ ವನವಾಸದ ಕಾಲಕ್ಕೆ ಇಲ್ಲಿಗೆ ಬಂದು ಐದು ಲಿಂಗಗಳನ್ನು ಸ್ಥಾಪಿಸಿದಂತೆ ತಿಳಿದು ಬರುತ್ತದೆ. ಈ ಲಿಂಗಗಳು ೩ ಅಡಿ ಎತ್ತರ, ೧॥ ಅಡಿ ಸುತ್ತಳತೆಯಾಗಿರುವವು. ಹಲವು ಕಾಲ ಬೈಲಿನಲ್ಲಿದ್ದ ಲಿಂಗಗಳಿಗೆ ೧೪ ನೇ ಶತಮಾನದಲ್ಲಿ ಕದಂಬರಾಜರು ದೇವಾಲಯಗಳನ್ನು ಕಟ್ಟಿಸಿ, ಒಂದೊಂದು ಲಿಂಗದ ಇದುರಿನಲ್ಲಿ ಒಂದೊಂದು ನಂದಿವಾಹನ ಸ್ಥಾಪಿಸಿದ್ದಾರೆ. ಇವು ಈಗಲೂ ದೃಢವಾಗಿರುವವು.

## ಕಲ್ಯಾಣಮಂಟಪ

ಇದು ಮಲ್ಲಿಕಾರ್ಜುನ ಸ್ವಾಮಿಯ ದೇವಾಲಯದ ವಾಯವ್ಯ ದಿಕ್ಕಿನಲ್ಲಿರುವದು. ಇದನ್ನು ವಿಜಯನಗರದರಸರ ಮಂತ್ರಿಯಾದ ಚಂದ್ರಶೇಖರರಾಯನು ಕಟ್ಟಿಸಿರುವನು. ಪ್ರತಿವರ್ಷ ರಥೋತ್ಸವದ ಕಾಲದಲ್ಲಿ ಈ ಸ್ಥಳದಲ್ಲಿ ವಿವಾಹ ಮಹೋತ್ಸವ ಮಾಡಿಸುತ್ತಾರೆ. ಇಲ್ಲಿಂದಲೇ ಮೆರವಣಿಗೆ ನಡೆಯುವದು. ಈ ಮಂಟಪದಲ್ಲಿ ಅನೇಕಾನೇಕ ಎರಕದ ವಿಗ್ರಹಗಳಿರುವವು. ಇವುಗಳನ್ನು ವಿಜಯನಗರದರಸನಾದ ಶ್ರೀಕೃಷ್ಣದೇವರಾಯನು ಕೆತ್ತಿಸಿ ದೇವಾಲಯಕ್ಕೆ ಕೊಟ್ಟಿರುವನು.

## ಷಣ್ಮುಖಸ್ವಾಮಿ

ಈ ವಿಗ್ರಹವು ಕಲ್ಯಾಣಮಂಟಪದ ದಕ್ಷಿಣ ಭಾಗದಲ್ಲಿರುವದು. ಇದನ್ನು ವಿಜಯನಗರದರಸರೇ ೧೫ ನೇ ಶತಮಾನದಲ್ಲಿ ಕೆತ್ತಿಸಿಕೊಟ್ಟಿರುವರು ಇದು ಸೌಂದರ್ಯವಾದ ಮೂರ್ತಿ. ೪೩ ಅಂಗುಲ ಎತ್ತರ, ೨೫ ಅಂಗುಲ ಅಗಲ ಇಲ್ಲಿಯೂ ಪೂಜಾಪುರಸ್ಕಾರಗಳು ಪುಣ್ಯಾತ್ಮರು ಸುಧಾರಿಸುವಂತೆ ಮಾಡಬೇಕಾಗಿದೆ.

## ಪಂಚಲಿಂಗ

ಇಲ್ಲಿಯ ಲಿಂಗಗಳು ಪಂಚಾಚಾರ್ಯರುದ್ಭವಿಸಿದ ಲಿಂಗಗಳೋಯೆಂಬುವಂತಿರುವವು. ಇಲ್ಲಿಯೂ ಪೂಜೆಯನ್ನು ಪುಣ್ಯಾತ್ಮರು ಮಾಡಿಸಬೇಕಾಗಿದೆ.

## ಕಲ್ಲುಕಂಬ

ಇದನ್ನು ೧೮ ನೇ ಶತಮಾನದಲ್ಲಿ ಕಂಬಿಗಣಾಚಾರಿಗಳು ಮಾಡಿಸಿದಂತೆ ಕಾಣಿಸುತ್ತದೆ. ಇದು ೧೫ ಅಡಿಗಳು ಎತ್ತರ, ೧೫ ಅಡಿಗಳ ಸುತ್ತಳತೆಯುಳ್ಳದ್ದಾಗಿ ಕಂಬದ ಸುತ್ತಲೂ ದೀವಿಗೆಗಳು ಇಡಲ್ಪಡುವ ಬಟ್ಟಲುಗಳೆಂಬಂತಿವೆ.

## ಶೀಲವಂತರಮಠ

ಇದು ಮಲ್ಲಿಕಾರ್ಜುನ ದೇವಸ್ಥಾನಕ್ಕೆ ೧೦ ಅಡಿಗಳ ದೂರದಲ್ಲಿದೆ. ಇದನ್ನು ಅರ್ಚಕರಮಠವೆಂದು ಕರೆಯುತ್ತಾರೆ. ಇಲ್ಲಿ ಅರ್ಚಕರೇ ಸೇವಾ ಮಾಡಿಕೊಂಡಿರುತ್ತಾರೆ. ಇದನ್ನು ಗಣಾಚಾರಿಗಳು ಕಟ್ಟಿಸಿದಂತೆ ತಿಳಿಯು.

ಬರುತ್ತದೆ. ಇಲ್ಲಿಗೆ ಶ್ರೀ ಸರ್ಪಭೂಷಣ ಶಿವಯೋಗಿಗಗಳು ಬಂದಿದ್ದರೆಂಬ ರೂಢಿ ಇರುವದು. ಇಲ್ಲಿಯ ನೀರು ನಿರ್ಮಲ.

## ಸಹಸ್ರಲಿಂಗ

ಈ ದೇವಸ್ಥಾನವು ಮಲ್ಲಿಕಾರ್ಜುನನ ದೇವಾಲಯಕ್ಕೆ ೧೦ ಅಡಿಗಳ ದೂರ ದಲ್ಲಿದೆ. ಇದನ್ನು ಸಹಸ್ರಲಿಂಗದೇವಾಲಯವೆಂತಲೂ, ರಾಮಚಂದ್ರನಿಂದ ಸ್ಥಾಪಿಸಲ್ಪಟ್ಟಕಾರಣ ರಾಮಸಹಸ್ರಲಿಂಗವೆಂತಲೂ ಕರೆಯುತ್ತಾರೆ. ಈ ಸಹಸ್ರಲಿಂಗಗಳು ನೇರಲೆಯ ಹಣ್ಣಿನಂತೆ ಕಾಣುತ್ತಿವೆ. ಪಾಣಿವಾಟ ಸಹಿತ ೩॥ ಅಡಿ ಎತ್ತರವಾಗಿ ೫ ಅಡಿ ಅಗಲವಾಗಿ ಇರುವದು, ಈ ನವೀನ ಕಾಲ ದವರು ಸಹಾ ಇಂಥ ಲಿಂಗವನ್ನು ಭರತಖಂಡದ ಯಾವ ಮೂಲೆಯಲ್ಲಿಯೂ ಕಾಣಲಿಲ್ಲವೆಂದು ಹೇಳುತ್ತಾರೆ. ಇಂಥಾ ಲಿಂಗಕ್ಕೆ ಅರ್ಚಕರು ವೀರಶೈವ ರಿದ್ದೂ ತುಂಬಾ ಅಸಹ್ಯವಾಗಿರುವಂತೆ ಮಾಡಿರುವದು ವಿಷಾಧ.

## ಪಾತಾಳೇಶ್ವರ

ಇದು ಶ್ರೀ ಮಲ್ಲಿಕಾರ್ಜುನಸ್ವಾಮಿಯ ದೇವಾಲಯಕ್ಕೆ ೧೨ ಅಡಿಗಳ ದೂರವಾಗಿದೆ. ಈ ಗುಡಿಯಲ್ಲಿ ಒಂದು ವಿಗ್ರಹವಿದ್ದು, ವಿಚಾರಿಸಲಾಗಿ ಹೇಮರಡ್ಡಿ ಮಲ್ಲಮ್ಮನ ವಿಗ್ರಹವೆಂದು ತಿಳಿಯುತ್ತದೆ. ಇದನ್ನು ಶ್ರೀಶೈಲದ ಇತಿ ಹಾಸವೆಂಬ ಗ್ರಂಥವನ್ನು ಪ್ರಕಟಿಸಿದ ಪಂಡಿತ ಎಂ. ನಂಜುಂಡಯ್ಯನವರು ಆ ವಿಗ್ರಹವನ್ನು ತಂದಿರಿಸಿರುವರು. ಇದು ೩೨ ಅಂಗುಲ ಎತ್ತರ, ೨೨ ಅಂಗುಲ ಅಗಲವಾಗಿ, ತಪಸ್ಸುಮಾಡುತ್ತಿದ್ದಂತೆ ಚಿತ್ರಿಸಲ್ಪಟ್ಟಿದೆ.

## ಪ್ರಸನ್ನಗಣಪತಿ

ಇದು ೩೪॥ ಅಂಗುಲ ಎತ್ತರವಾಗಿ, ೩೧ ಅಂಗುಲ ಅಗಲವಾಗಿರುವದು ಇದು ಪೂಜಾಪುರಸ್ಕಾರಗಳಿಲ್ಲದೇ ಬಿದ್ದಿರುವದು.

## ಭೀಮೇಶ್ವರಲಿಂಗ

ಇದು ಭೀಮನಿಂದ ಸ್ಥಾಪಿಸಲ್ಪಟ್ಟತೆಂದು ರೂಢಿವಾಕ್ಯವಿದೆ. ಇದಕ್ಕೂ ಪೂಜಾದಿಗಳಿಲ್ಲ.

## ಅನ್ನಪೂರ್ಣೇಶ್ವರಿ

ಇಲ್ಲಿ ಮಲ್ಲಿಕಾರ್ಜುನ ಸ್ವಾಮಿಯ ದೇವಾಲಯದ ಆಗ್ನೇಯ ಭಾಗದಲ್ಲಿ ೬೦ ಅಡಿಗಳ ದೂರದಲ್ಲಿರುವದು. ಇದಕ್ಕೂ ಪೂಜೆಯಿಲ್ಲ. ಆದರೆ ಬ್ರಾಹ್ಮಣರು, ವೈಶ್ಯರು ಆಗಿಂದಾಗ್ಗೆ ಬಂದು ಅನ್ನಸಂತರ್ಪಣೆ ಮಾಡುತ್ತಾರೆ.

## ಧ್ವಜಸ್ತಂಭಗಳು

ಈ ಸ್ತಂಭಗಳು ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ಮುಂಭಾಗದಲ್ಲೊಂದು, ಶ್ರೀ ಭ್ರಮರಾಂಬಾ ದೇವಾಲಯದ ಮುಂಭಾಗದಲ್ಲೊಂದು ಸ್ಥಾಪಿತವಾಗಿರುವವು

## ಭೃಂಗಿವಿಗ್ರಹ

ಈ ವಿಗ್ರಹವು ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ದೇವಾಲಯದ ಪೂರ್ವ ದಿಕ್ಕಿನಲ್ಲಿರುವದು. ಇದು ಸಹಾ ಅವ್ಯವಸ್ಥೆಯಲ್ಲಿ ಬಿದ್ದಿರುವದು. ಇದನ್ನು ಶ್ರೀ ಕೃಷ್ಣಶಾಸ್ತ್ರಿಗಳ ಭಾವಚಿತ್ರಸಹಿತ ಸೂಚಿಸಿರುವರು.

## ಕ್ಷೇತ್ರದ ಆಫೀಸು

ಈ ಕಾರ್ಯಸ್ಥಾನವು ಅನ್ನಪೂರ್ಣೇಶ್ವರೀ ವಿಗ್ರಹದ ನೈಋತ್ಯ ದಿಕ್ಕಿನಲ್ಲಿ ೧೦ ಅಡಿಗಳ ದೂರದಲ್ಲಿರುವದು. ಉತ್ಸವಕಾಲಗಳಲ್ಲಿ ಸಂಘದ ಅಧ್ಯಕ್ಷರೂ ಸಭ್ಯರೂ ಇಲ್ಲಿ ವಾಸಮಾಡುತ್ತಾರೆ. ಇಲ್ಲಿ ದೇವಸ್ಥಾನಕ್ಕೆ ಬಂದ ಸಾಧು-ಸನ್ಯಾಸಿಗಳಿಗೆ ಸದಾಬರ್ತ (ಊಟದ ಭತ್ಯವು) ಕೊಡಲ್ಪಡುತ್ತದೆ. ಈ ಕಾರ್ಯಸ್ಥಾನವು ಅತಿ ಪೂರ್ವದಲ್ಲಿ ಬೌದ್ಧದೇವಸ್ಥಾನವಾಗಿದ್ದಂತೆ ಕಂಡು ಬರುತ್ತದೆ.

## ನೀರಿನ ಕೊಳಗಳು

ಯಾವ ತೀರ್ಥಯಾತ್ರಿಗಳಿಗಾದರೂ ನಿರ್ಮಲವಾದ ನೀರಿರಬೇಕಾಗುತ್ತದೆ ಶ್ರೀಶೈಲ ಕ್ಷೇತ್ರದಲ್ಲಿ ಪೂರ್ವದ ರಾಜರಿಂದ ಕಟ್ಟಿಸಲ್ಪಟ್ಟ ಐದಾರು ಕೊಳಗಳಿರುವಾಗಲಿ, ಗಾಳಿಬೆಳಕುಗಳಿಲ್ಲದುದರಿಂದ ನೀರು ಕೊಳಕಾಗಿರುತ್ತದೆ. ಇಂತಹ ನೀರಿನ ಉಪಯೋಗದಿಂದ ಯಾತ್ರಿಕರು ರೋಗಾದ್ಯುಪದ್ರವಗಳಿಂದ ಬಳಲಬೇಕಾಗುತ್ತದೆ. ಆಧುನಿಕ ಸುಧಾರಿಸಿದ ಪ್ರಜಾಪ್ರಭುತ್ವದವರು ಈ

ಕೊರತೆಯನ್ನು, ಮಾರ್ಗಸೌಕರ್ಯವನ್ನು ಹೇಗೆ ಕಲ್ಪಿಸಿರುವರೋ, ಹಾಗೆ ನೀರಿನ ಸೌಕರ್ಯವನ್ನು ಕಲ್ಪಿಸಿದರೆ ಯಾತ್ರಿಕರು ಹಾಡಿಹರಸುತ್ತಾರೆ.

## ಶ್ರೀ ಮಲ್ಲಿಕಾರ್ಜುನಲಿಂಗ

ನಮ್ಮ ಭರತಖಂಡದಲ್ಲಿ ಹನ್ನೆರಡು ಜ್ಯೋತಿರ್ಲಿಂಗಗಳಿರುವವೆಂತಲೂ ಈ ಲಿಂಗಗಳು ಒಂದರಕೆಳಗೊಂದು ಹನ್ನೆರಡು ಲಿಂಗ ಳಿರುವವೆಂತಲೂ ಮೇಲಣ ಲಿಂಗಕ್ಕಭಿಷೇಕ ಮಾಡಿದರೆ ಸೂತ್ರರೂಪವಾಗಿ ಕಡೆಯಲ್ಲಿರುವ ಮೂಲ ಲಿಂಗಕ್ಕೆ ಸೇರುವದೆಂತಲೂ ಪುರಾಣಗಳಲ್ಲಿ ಉಕ್ತವಾಗಿರುವದಲ್ಲದೆ ಭಕ್ತರು ಮಾಡುವ ಪೂಜೆಯು ಮಹಾಶಿವಲಿಂಗಕ್ಕೆ ಸೋಂಕಿ ಭಕ್ತನ ಮುಕ್ತಿಗೆ ಆಸ್ಪದವಾಗುವದೆಂತಲೂ ತಿಳಿಸಲ್ಪಟ್ಟಿದೆ. ಲಿಂಗದ ಸುತ್ತಲೂ ಗರ್ಭಾಲಯದ ಲ್ಲಿದ್ದ ಹಾಸುಬಂಡೆಗಳನ್ನೆಲ್ಲಾ ತೆಗೆಯಿಸಿ ರಮಣೀಯವಾಗಿ ಹೊಂದಿಸಿರುವರು. ಇಲ್ಲಿ ೩೬೦ ದಿನಗಳ ಅಹರ್ನಿಶಿಗಳಲ್ಲಿಯೂ ತೇಜೋವಂತವಾಗಿ ಬೆಳಗುವ ನಂದಾದೀವಿಗೆಯಿರುವದು. ಗರ್ಭಾಲಯವು ಚಿಕ್ಕದಾದುದರಿಂದ ಜನರು ಕಿಕ್ಕಿರಿದು ನಿಂತಿರುವಾಗ ತುಂಬಾ ಶಕೆಯುಂಟಾಗುತ್ತದೆ. ಈ ಪದ್ಧತಿ ತಪ್ಪಿಸಲು ಯೋಗ್ಯ ಯೋಜನೆ ಮಾಡಬೇಕು.

## ಕ್ಷೇತ್ರದ ಮಹಾ ಶಿವರಾತ್ರಿ ಮಹೋತ್ಸವ

ಈ ವಿಷಯವನ್ನು ಕುರಿತು ಪ್ರಥಮದಲ್ಲಿಯೇ ವಿಶದವಾಗಿ ತಿಳಿಸಿ ರುವೆನು. ಈ ಉತ್ಸವವನ್ನು ಕಣ್ಣಾರೆ ನೋಡಿ, ಮನದಣಿಯುವಂತೆ ಪೂಜೆ ಮಾಡಿ, ನಲಿನಲಿದು ಹರಿಸುವವರೇ ಧನ್ಯರಲ್ಲವೇ ! ಶ್ರೀಸ್ವಾಮಿಯ ದರ್ಶ ನಕ್ಕೆ ಪ್ರವೇಶದ ಚೀಟಿಯನ್ನು ತೆಗೆದುಕೊಳ್ಳಬೇಕು. ಉತ್ಸವವಾದ ಮೂರ ನೆಯ ದಿನದಿಂದ ಎಲ್ಲರಿಗೂ ಪುಕ್ಕಟೆ ಪ್ರವೇಶವಿರುತ್ತದೆ. ಯಾತ್ರಿಕರು ಆ ಮಹಾ ಶಿವರಾತ್ರಿಯ ದಿನ ಜಾಗರಣೆಮಾಡಿ ಮಹತ್ತರವಾದ ಭಕ್ತಿಯಿಂದ ಪೂಜಿಸಿ ಧನ್ಯರಾಗುತ್ತಾರೆ.

## ಮುಂಡಾಸ ( ಸಾಗಾ ) ಧಾರಣ

ಬಟ್ಟೆಯ ಮುಂಡಾಸವನ್ನು ಆಂಧ್ರ ದೇಶದ ಕೆಲವು ಶಿವಾರ್ಚಕರಾದ ನೆಯ್ಗೆಯವರು ಪ್ರತಿನಿತ್ಯದಲ್ಲಿಯೂ ಸ್ನಾನ, ಶಿವಪೂಜಾದಿಗಳನ್ನು ಮುಗಿಸಿ

ಕೊಂಡು ಶ್ರೀಮಲ್ಲಿಕಾರ್ಜುನನ ಧ್ಯಾನದಿಂದ ಒಂದು ಮೊಳ ಅಗಲವುಳ್ಳ ಮಡಿ ಪಂಜೆಯಂಥಾ ಬಟ್ಟೆಯನ್ನು ನೆಯ್ಯುತ್ತಾರೆ. ಹೀಗೆ ೩೬೦ ಮೊಳ ನೆಯ್ದ ಬಟ್ಟೆಯನ್ನು ಓರ್ವ ಮನುಷ್ಯನು ಲಿಂಗದ ಆಕಾರದಿಂದ ಸುತ್ತಿಕೊಂಡು ಉಪವಾಸದಿಂದ ಶ್ರೀಶೈಲಕ್ಕೆ ತನ್ನ ಮಿತ್ರರೊಡನೆ ಸೇರುತ್ತಾನೆ ತಂದು ಶಿವನಿಗ ರ್ಪಿಸುತ್ತಾನೆ ಪೂಜಿಸುತ್ತಾನೆ ಮಂಗವಾದ್ಯಗಳೊಡನೆ ಗುಡಿಯನ್ನು ಹತ್ತುತ್ತಾನೆ. ಹತ್ತಿ ಅತ್ಯಂತ ಚಮತ್ಕಾರವಾಗಿ ಅರ್ಧಗಂಟೆಯೊಳಗಾಗಿ ದಿಕ್ಕುಗಳೆಲ್ಲಕ್ಕು ಮುಚ್ಚುವಂತೆ ನಂದಿವಿಗ್ರಹಗಳನ್ನಾವರಿಸಿಕೊಂಡು ಮುಂಡಾಸದ ಕೊನೆಯ ಸೆರಗು ದಕ್ಷಿಣ ಭಾಗಕ್ಕೆ ಬೀಳುವಂತೆ ನಯವಾಗಿ ಸುತ್ತುತ್ತಾನೆ. ಇದನ್ನು ಸುತ್ತುವವರು ದೈವಾಂಶಸಂಭೂತರೆಂದು ಕೆಲವರು ತಿಳಿಯುತ್ತಾರೆ. ಅಸ್ತು ! ಆ ಮುಂಡಾಸ ಸುತ್ತಿದವರು ಅನಂತರ ಇಳಿದುಬಂದು ದಾನಧರ್ಮಗಳುಮಾಡಿ ಉಪವಾಸ ವ್ರತವನ್ನು ಬಿಡುತ್ತಾರೆ. ಶಿವರಾತ್ರಿಯ ದಿನ ಯಾತ್ರಿಕರು ಭಕ್ತಿಯಿಂದ ಕಾಲಕಳೆಯುತ್ತಾರೆ. ಮೂರನೆಯದಿನ ಸ್ನಾನ ಶಿವಾರ್ಚನಾದಿಗಳನ್ನು ಮುಗಿಸಿ ಭೋಜನ ಮಾಡುತ್ತಾರೆ. ಹೀಗೆ ಯಾತ್ರಿಕರು ಶ್ರೀಶೈಲದಲ್ಲಿ ಒಂದೆರಡು ದಿನಗಳಿದ್ದು ಮರಳಿ ಬರುವಾಗ ಪಾತಾಳ ಗಂಗೋದಕವನ್ನು, ಲಿಂಗಗಳನ್ನು ಸ್ಪಟಿಕ, ರುದ್ರಾಕ್ಷಗಳನ್ನು, ಸ್ವಾಮಿಯ ಪ್ರಸಾದ ಕುಸುಮವನ್ನು ಶ್ರೀ ಭ್ರಮರಾಂಬೆಯ ಕುಂಕುಮವನ್ನು ಒಂದು ಕೈಬಟ್ಟೆಯನ್ನು, ಕೋಲನ್ನು ತೆಗೆದುಕೊಂಡು ಬರುವರು.

## ಶ್ರೀ ಭ್ರಮರಾಂಬಿಕೆ

ಈ ದೇವಿಯು ಶ್ರೀಶೈಲದಲ್ಲಿ ಶ್ರೀ ಮಲ್ಲೇಶ್ವರ ದೇವಸ್ಥಾನದ ಹಿಂಭಾಗದ ಪಶ್ಚಿಮ ದಿಕ್ಕಿನಲ್ಲಿ ೬೦ ಗಜಗಳ ದೂರದಲ್ಲಿ ಕಟ್ಟೆರುವಳು. ಮಿಕ್ಕ ವಿಷಯಗಳನ್ನು ಮೊದಲೇ ವರ್ಣಿಸಿರುವೆನು.

ಪಾತಾಳ ಗಂಗೆಯ ವಿಷಯವೂ ಸಹಾ ವಿವರಿಸಿರುವೆನು. ಪಾತಾಳ ಗಂಗೆಯಿಂದ ೧॥ ಮೈಲು ದೂರದಲ್ಲ ಲಿಂಗದ ಹೊಳೆ ಇರುವದು. ಯಾತ್ರಿಕರು ಈ ಹೊಳೆಯಲ್ಲಿರುವ ನುಣುಪಾದ ಶಿಲೆಗಳನ್ನು ತಂದು ತಂತಮ್ಮ ಮನೆಗಳಲ್ಲಿರಿಸಿಕೊಂಡು ಪೂಜಿಸುತ್ತಾರೆ.

## ಕಂಬಿಗಳು

ಈ ಕಂಬಿಗಳು ಕನ್ನಡನಾಡಿನಿಂದಲೇ ಬರುತ್ತವೆ. ಕೆಲವು ಮಹಾ ರಾಷ್ಟ್ರ ದೇಶದಿಂದ ಬರುತ್ತವೆ. ಈ ಕಂಬಿಯು ಗಣಾಚಾರಿಗಳು ಶ್ರೀಶೈಲಕ್ಕೆ ಉಗಾದಿ ಹಬ್ಬಕ್ಕೆ ಬರುತ್ತಾರೆ ಇವರೆಲ್ಲರೂ ಧಾರವಾಡ, ಬಿಜಾಪುರ, ಬೆಳ ಗಾಂವ, ಸೊಲ್ಲಾಪುರ ಪ್ರಾಂತದವರಾಗಿರುತ್ತಾರೆ. ಈ ಪದ್ಧತಿ ೧೩ ನೇ ಶತ ಮಾನದಿಂದ ಬಂದಂತೆ ಕಾಣುತ್ತದೆ. ಕಂಬಿಯಲ್ಲಿ ತಂದ ನಂದಿವಿಗ್ರಹವನ್ನು ಶ್ರೀ ಮಲ್ಲೇಶ್ವರನ ಪಕ್ಕದಲ್ಲಿರಿಸಿ, ಚನ್ನಾಗಿ ಪೂಜಿಸುತ್ತಾರೆ. ಈ ಪ್ರಕಾರ ಕನ್ನಡನಾಡಿನ ಜಂಗಮರು ಗಣಾಚಾರಿಗಳಾಗಿ ಬಂದು ಶ್ರೀಸ್ವಾಮಿಯನ್ನು ಸೇವಿಸಿ, ತಂತಮ್ಮ ಗ್ರಾಮಗಳನ್ನು ಹೊಕ್ಕು ಅಲ್ಲಿಯ ಭಕ್ತರಿಗೆ ಶ್ರೀಪ್ರಸಾದ ವನ್ನಿತ್ತು ಅವರಿಂದ ಕೊಡಲ್ಪಟ್ಟ ಹಣದಿಂದ ಗಣಾರಾಧನೆ ಮಾಡಿಸುತ್ತಾರೆ.

ಕುಂಭೋತ್ಸವ ಜಾತ್ರೆಯು ಚೈತ್ರ ಶುದ್ಧ ಹುಣ್ಣಿವೆಯ ದಿನ ನಡೆಯು ತ್ತಿದೆ. ಇದೇ ಶ್ರೀಶೈಲದಲ್ಲಿ ಮೂರನೇ ಜಾತ್ರೆ ಇದೇ ಕೊನೆಯ ಜಾತ್ರೆ. ಈ ಜಾತ್ರೆಯಲ್ಲಿ ಶ್ರೀ ಭ್ರಮರಾಂಬಿಕಾ ದೇವಿಯ ಮುಖ್ಯವಾದ ಉತ್ಸವ. ಈ ಹುಣ್ಣಿವೆಯ ದಿನ ಯಾತ್ರಿಕರು ರಾಶಿರಾಶಿಯಾಗಿ ಕುಂಕುಮವನ್ನು ತಂದು ದೊಡ್ಡರಾಶಿಯಾಕಾರಮಾಡಿ, ಬಳೆ, ಬಿಚ್ಚೋಲೆ, ಕರಿಮಣಿ, ಹೂವು ಮುಂತಾದ ಮಂಗಳ ದ್ರವ್ಯಗಳಿಂದ ಅಲಂಕರಿಸುತ್ತಾರೆ. ಮಹಾಭಕ್ತಿಯಿಂದ ಸ್ತೋತ್ರಮಾಡುತ್ತಾರೆ. ಇದಾದ ಕೆಲವು ನಿಮಿಷಗಳಲ್ಲಿಯೇ ಈ ರಾಶಿಯಾಗಿ ಹಾಕಿದ ಕುಂಕುಮವು ತನ್ನಷ್ಟಕ್ಕೆ ತಾನೇ ಚೆಲ್ಲಾಡುತ್ತದೆ. ಆಗ ಭಕ್ತಾದಿ ಗಳು ಮಹದಾನಂದದಿಂದ ಆ ಕುಂಕುಮವನ್ನು ದೇವಿಯ ಪ್ರಸಾದವಾಗಿ ತೆಗೆದುಕೊಂಡು ತಮ್ಮ ಗ್ರಾಮಗಳಿಗೆ ಹೋಗುತ್ತಾರೆ. ಆ ಕುಂಕುಮವು ಅಲ್ಲಿ ನೆರೆದಿದ್ದವರಿಗೆ ಸಿಕ್ಕುವದೇ ಇಲ್ಲ. ಅಥವಾ ಸಿಕ್ಕರೂ ಒಂದು ತೊಲೆ ಯಷ್ಟು ಪ್ರಾಪ್ತವಾಗುವದು ಮಹಾಪುಣ್ಯವೆಂದು ಭಾವಿಸುತ್ತಾರೆ.

ಆ ರಾತ್ರಿ ಚೆಂಚರು ಒಂದು ಕೋಣವನ್ನು ಬಲಿಯಾಗಿ ಕೊಡುತ್ತಾರೆ. ಈ ವಿಷಯದಲ್ಲಿ ಉತ್ತಮ ವರ್ಣದವರ್‍ಯಾರೂ ಭಾಗವಹಿಸುವದಿಲ್ಲ. ಈ ಬಾಗವು ಕ್ರಮವಾಗಿ ಕಡಿಮೆಯಾಗುತ್ತಲಿದೆ. ಆಧುನಿಕರಾದ ನಾಗರಿಕರು ಈ ಹಿಂಸಾಕೃತ್ಯವನ್ನು ಕಡಿಮೆಮಾಡುವರೆಂದು ನಂಬುತ್ತೇನೆ.

## ಕ್ಷೇತ್ರದ ಮಠಗಳು

ಶ್ರೀಶೈಲವು ಅತ್ಯುನ್ನತವಾದ ಸ್ಥಿತಿಯಲ್ಲಿದ್ದು ಮಹಾ ವೈಭವದಿಂದ ನಡೆಯುತ್ತಿರುವ ಕಾಲದಲ್ಲಿ ಅಗಣಿತವಾದ ಮಹೇಶ್ವರ ಮಠಗಳಿದ್ದಂತೆ ಕಂಡು ಬರುತ್ತದೆ ಗುರುವರ್ಗದ ಮಠಗಳೂ, ವಿರಕ್ತರ ಮಠಗಳೂ ಸಹಾ ಪ್ರಬಲ ಸ್ಥಿತಿಯಲ್ಲಿದ್ದುದಾಗಿ ತಿಳಿದು ಬರುತ್ತದೆ. ಸದ್ಯಃ ನಾಲ್ಕಾರು ಮಠಗಳಿವೆ. ೧ ಘಂಟಾಮಠ, ೨. ಸಾರಂಗಮಠ, ೩. ವಿಭೂತಿಮಠ, ೪. ರುದ್ರಾಕ್ಷಿ ಮಠ, ೫. ನಂದಿಕೇಶ್ವರಮಠ, ೬. ವಟಸಿದ್ಧಮಠ, ೭. ಚಂದ್ರಗುಂಡಮಠ ೮. ಕಮರೀಮಠ ಅಸ್ತಿತ್ವದಲ್ಲಿರುವವು. ಈ ಕ್ಷೇತ್ರದ ಅಧಿಕಾರವೆಲ್ಲವೂ ಆತ್ಮಕೂರಿನಲ್ಲಿ ನೆಲೆಸಿರುವ ಶ್ರೀಮಜ್ಜಗದ್ಗುರು ಪಂಡಿತಾರಾಧ್ಯರ ಪೀಠಕ್ಕೆ ಮಿಲನವಾಗಿ ಪೂರ್ವದಂತೆ ಶ್ರೀಶೈಲ ಸಾಮ್ರಾಜ್ಯಾಧಿಪತಿಗಳಾಗುವರೆಂದು ನಿರೀಕ್ಷಿಸುವ ೧. ಭದ್ರಕುಂಡ, ೨. ವಟೇಶ್ವರಲಿಂಗ, ೩. ವಾರಣೇಶ್ವರಲಿಂಗ, ೪ ಮಲಕದೇವಮ್ಮ, ೫. ಕದಳೀವನ, ೬. ವರವಿನಾಯಕ, ೭. ಆಟಕೇಶ್ವರ ದೇವಾಲಯ ಚಪ್ರಾಧಾರ, ಪಂಚಧಾರ, ೯. ಶಿಖರೇಶ್ವರ ದೇವಾಲಯ, ೧೦ ಮುಕ್ತಿಶಿಖರ ೧೧. ಬಿಲ್ವೇಶ್ವರ (ಇದಕ್ಕೆ ಆಂಧ್ರರು ಚುಂಡಿಪೆಂಟ) ಅನ್ನುತ್ತಾರೆ. ಈ ಶ್ರೀಶೈಲದಲ್ಲಿರುವ ಲೆಕ್ಕಕ್ಕೆ ಮಿಕ್ಕ ಲಿಂಗಗಳೂ, ಲಿಂಗದ ಹೆಸರುಗಳೂ ಬರೆಯಲು ಸಾಧ್ಯವಿಲ್ಲವಾಗಿದೆ. ಮುಖ್ಯವಾಗಿ ಕಾಣುವ ಶಿಲಾವಿಗ್ರಹವು ವೀರಶೈವ ಮಹಿಳೆಯರಿಗೆ ಆದರ್ಶವಾಗಿರುವ ಹೇಮರಡ್ಡಿ ಮಲ್ಲಮ್ಮನವರದಾಗಿದೆ. ಈ ಮಹಾತ್ಮಳ ಚರಿತ್ರೆಯು ಪೂಜ್ಯವಾದುದಾಗಿರುವುದರಿಂದ ಪ್ರತ್ಯೇಕವಾಗಿರುವ ಗ್ರಂಥದಲ್ಲಿ ಓದಿ ತಿಳಿದುಕೊಳ್ಳಬಹುದಾಗಿದೆ. ಇದಲ್ಲದೆ ಶ್ರೀಶೈಲ ಪೀಠಾಧಿಕಾರಿಗಳ ವಿಷಯವನ್ನು ಶಿವಾಗಮಗಳಲ್ಲಿ, ಪುರಾಣಗಳಲ್ಲಿ ಉದಹರಿಸಲ್ಪಟ್ಟಿದೆ. ಆಂಧ್ರಕವಿಚಕ್ರವರ್ತಿಯೆಂದೆನ್ನಿಸಿಕೊಂಡ ನನ್ನೆಚೋಡಕವಿಯ ಕುಮಾರಸಂಭವದಲ್ಲಿಯೂ ವಿವರಿಸಲ್ಪಟ್ಟಿದೆ.

ಕ್ಷೇತ್ರದ ಮಹಾತ್ಮೆ—ಯನ್ನು ಬರೆಯಲು ಅಗಾಧವಾಗಿರುವದು. ಮುಖ್ಯವಾಗಿ ಹೇಳಬೇಕಾದರೆ ಈ ಶ್ರೀಶೈಲ ಮಲ್ಲಿಕಾರ್ಜುನನು ತನ್ನನ್ನು ತ್ರಿಕರಣಪೂರ್ವಕವಾಗಿ ಧ್ಯಾನಿಸಿದವರಿಗೂ, ಪೂಜಿಸಿದವರಿಗೂ ಕೃತಾರ್ಥತೆಯನ್ನು ಕೊಡುವೆನೆಂದು ಹೇಳಿರುವಕಾರಣ ಈ ಪ್ರದೇಶವು ಭೂಕೈಲಾಸವಾಗಿರುವದು.

## ಕ್ಷೇತ್ರದ ಹಿಂದಿನ ವೈಭವ

ಕ್ಷೇತ್ರದ ಹಿಂದಿನ ವೈಭವವನ್ನು ವರ್ಣಿಸಲು ನನ್ನ ಲೇಖಿನಿಗೆ ಸಾಧ್ಯವಿಲ್ಲ. ಅಂತಹ ವೈಭವವನ್ನು ಪ್ರಜಾ ರಾಜ್ಯವಾಗಿರುವ ಭಾರತ ವರ್ಷವು ( ಅದರಲ್ಲಿ ಮುಖ್ಯವಾಗಿ ಆಂಧ್ರ ಪ್ರದೇಶವು ) ಕ್ರಮಕ್ರಮವಾಗಿ ಅಭಿವೃದ್ಧಿಗೆ ಬರುವಂತೆ ಮಾಡಿದರೆ ನೂತನ ಭೂಕೈಲಾಸವೆಂದು ಪರಿಗಣಿಸಲಾವ ಸಂಶಯವೂ ಇಲ್ಲ.



# ಶ್ರೀಶೈಲ ಭ್ರಮರಾಂಬಿಕಾ ನಕ್ಷತ್ರಮಾಲಿಕಾ

+++++++++

ಕಂ|| ನಿನ್ನಯ ಚರಣವ ನುತಿಪೇಂ
ಪನ್ನಗಧರರಾಣಿ ಪರ್ವತಾತ್ಮಜೆ ಜನನೀ
ಯನ್ನಯ ಪಾಪ ಸಮೂಹವ
ಗಣ್ಯವು ಪರಿಹರಿಸು ಬೇಗ ಶ್ರೀ ಭ್ರಮರಾಂಬಾ ||೧||

ಕಂ|| ಶ್ರೀಶೈಲದ ವೈಭವವಾ
ಶೇಷಂವಾಗೀಶ ಪೊಗಳಲಾರ್ಪರೆ ಧರೆಯೊಳ್
ಆಶಿಸುವೆ ನಿನ್ನ ಕೃಪೆಯಂ
ದಾಸನ ವಾಕ್ಯಗಳ ಕೇಳು ಶ್ರೀ ಭ್ರಮರಾಂಬಾ ||೨||

ಕಂ|| ಭಾರತ ಭೂಮಿಯ ಜನರೀ
ದೂರದ ದುರ್ಗಮದ ಗಿರಿಯ ನಧಿರೋಹಿಸೆಸಿ
ಗಾರದ ರಸ್ತೆಯನೆಣಿಪರು
ಕಾರುಣ್ಯದಿ ರಕ್ಷಿಸಮ್ಮ ಶ್ರೀ ಭ್ರಮರಾಂಬಾ ||೩||

ಕಂ|| ಲಕ್ಷೋಪಲಕ್ಷ ಜನರಗೆ
ಅಕ್ಷಯವಾಗಿರ್ಪ ನಿನ್ನ ಭೂಕೈಲಾಸಂ
ತಕ್ಷಣ ಸೇರುವ ಮಾರ್ಗಂ
ವೀಕ್ಷಿಸಿ ಸಲಹುವದು ಲೇಸು ಶ್ರೀ ಭ್ರಮರಾಂಬಾ ||೪||

ಕಂ|| ಅಂಬಾ ಹೇ ಜಗದಂಬಾ
ಹಂಬಲಿಸುವ ಪ್ರಜೆಯ ಮೊರೆಯನಾಲಿಸುತಾಯೇ
ಸಂಭ್ರಮದಿ ನಿನ್ನ ದರ್ಶನ
ವಂಬಿಡದಲೆ ಕೊಡಿಸು ಬೇಗ ಶ್ರೀ ಭ್ರಮರಾಂಬಾ ||೫||

ಕಂ|| ಸುಖವಾದಿ ಯಾತ್ರೆಯೆನಿಸುತ
ಸುಖದಿಂ ಶ್ರೀಶೈಲ ಮಲ್ಲಿಕಾರ್ಜುನ ಜಗದೊಳ್

ಸುಖವಾದ ಯಾತ್ರೆಯೆಂಬಾ
ಸುಖವಾರ್ತೆಯು ಬೆಳೆಸಃ ದೇವಿ ಶ್ರೀ ಭ್ರಮರಾಂಬಾ ||೬||

ಕಂ|| ಬಾರವ್ಮಾ ಭಾಗ್ಯನಿಧಿಯೇ
ಬಾರವ್ಮ ಭಕ್ತ ಕಾಮಧೇನುವೆ ಗಿರಿಜೇ
ಬಾರವ್ಮ ಕಲ್ಪತರುವೇ
ಬಾರವ್ಮಾ ಪಾಲಿಸವ್ಮ ಶ್ರೀ, ಭ್ರಮರಾಂಬಾ ||೭||

ಕಂ|| ನಿನ್ನಂ ನೋಡಲು ಭಕ್ತರು
ಗಮ್ಮನೆ ಬರುತಿರ್ಪದರದನು ಕಾಣದೆ ಜನನೀ
ಸುಮ್ಮನೆ ಯಿರ್ಪುದು ಧರ್ಮವೆ
ಸಮ್ಮನದ ಹಾದಿ ತೋರು ಶ್ರೀ ಭ್ರಮರಾಂಬಾ ||೮||

ಕಂ|| ಜ್ಯೋತಿರ್ಲಿಂಗವ ಕಾಣಲು
ಆತುರದಿಂ ಬರ್ಪ ಭಜಕವೃಂದವ ಸಲಹ
ಲ್ಕಾತರದಿ ಭೂರಿಸುಖವನು
ಭೂತಳದೊಳ್ ನೆಗಳ್ದು ಸಲಹು ಶ್ರೀ ಭ್ರಮರಾಂಬಾ ||೯||

ಕಂ|| ಶ್ರೀಶೈಲ ಶಿಖರನೋಡ್ದಡೆ
ಭಾಸುರತರ ಮೋಕ್ಷವೆಂದು ಶ್ರುತಿಗಳು ಸಾರ
ಲ್ದೇಶದ ಜನರೈತಂದಿರೆ
ಪೋಷಿಸು ಸನ್ಮಾರ್ಗವಿತ್ತು ಶ್ರೀ ಭ್ರಮರಾಂಬಾ ||೧೦||

ಕಂ|| ಹಿಂದಣ ವೈಭವ ಶ್ರೀಗಿರಿ
ಹೊಂದುವತೆರ ಮಾಳ್ಪಯುಕ್ತಿ ಬೋಧಿಸು ಜನಕಾ
ನಂದದಿ ನಿನ್ನಯ ಪದತಳ
ಸೌಂದರ್ಯವ ತೋರು ತಾಯೆ ಭ್ರಮರಾಂಬಾ ||೧೧||

ಕಂ|| ಆಯಾಸಗೊಳಿಸಿ ಫಲವೇಂ
ತಾಯೇನೀನಿಂತು ಜಗದಿ ಸುಲಭದ ಮಾರ್ಗಂ
ನ್ಯಾಯದಿ ತೋರಿದೆಯಾ ದೊಡು
ಪಾಯದಿ ನಿನ್ಬಳಿಗೆ ಬಕಲಿ ಶ್ರೀ ಭ್ರಮರಾಂಬಾ ||೧೨||

ಕಂ|| ಶ್ರೀಶೈಲಯಾತ್ರೆಯೆಂದರೆ
ದೇಶದ ಜನ ಭಯದಿ ಹೊರಡಲಂಜುವರಹಹಾ

ಲೇಸಾದ ಮಾರ್ಗ ಕಲ್ಪಿಸಿ
ಗಾಸಿಯುಗೊಳಿಸದಲೆ ಸಲಹು ಶ್ರೀ ಭ್ರಮರಾಂಬಾ ॥೧೩॥

ಕಂ॥ ಅತಿಪೂರ್ವಯುಗದಿವುಟ್ಟಿದು
ದತಿಶಯಸುಖವೀವ ತೆರಿಯನೋಡಲು ಜನರಾ
ತತ ಪ್ರೀತಿಯ ಪೊಂದಿಹು
ವತಿ ಬೇಗನೆ ರಕ್ಷಿಸಮ್ಮ ಶ್ರೀ ಭ್ರಮರಾಂಬಾ ॥೧೪॥

ಕಂ॥ ಶ್ರೀ ಪಾರ್ವತಿ ಸತ್ಯಪಾವತಿ
ಪಾಪಾತ್ಮರ ಭವವ ಕಳೆವ ಹೈಮಾವತಿಯೇ
ತಾಪತ್ರಯದಲಿ ಶಿಲ್ಕಿದೆ
ಶ್ರೀಪತಿ ಸೋದರಿಯೆ ಪೊರೆಯೆ ಶ್ರೀ ಭ್ರಮರಾಂಬಾ ॥೧೫॥

ಕಂ॥ ತಾಯಿಯು ಮಗನಿಗೆ ಮುನಿದರೆ
ಕಾಯುವರಾರುಂಟು ಜಗದಿ ಕರುಣಾಶರಧೀ
ಆಯಾಸ ಕಳೆದು ಭಜಕರ
ಮಾಯಾಜಾಲವನು ಬಿಡಿಸು ಶ್ರೀ ಭ್ರಮರಾಂಬಾ ॥೧೬॥

ಕಂ॥ ಭವದೀಯ ಪ್ರಸಾದ ಕುಂಕುಮ
ವವಿರತದೋಳ್ಧರಿಸಿ ಜನರು ಧನ್ಯರ್ಜಗದೋಳ್
ಸುವಿವೇಕದಿಂದ ನಿನ್ನಯ
ಪ್ರವಿಮಲ ನಾಮವನು ಭಜಿಪೆ ಶ್ರೀ ಭ್ರಮರಾಂಬಾ ॥೧೭॥

ಕಂ॥ ಆವನಾಗಲಿ ನಿನ್ನ ನಾಮವ
ಭಾವದಲಿ ನೆನೆಯುವನು ಧನ್ಯನೂ
ದೇವಿ ಚರಣವ ನೆನೆದು ನಿತ್ಯದಿ
ಭಾವಿಸುವನೇ ಪುಣ್ಯವಂತನು ಶ್ರೀ ಭ್ರಮರಾಂಬಾ ॥೧೮॥

ಕಂ॥ ಅಷ್ಟಕಷ್ಟಗಳಿಂದ ಪಡೆಯುವ
ಶ್ರೇಷ್ಠ ಪುಣ್ಯವು ಸುಲಭ ಮಾರ್ಗದಲಿ
ಥಟ್ಟನೆ ಪಡೆಯುವ ಸುಮಾರ್ಗದಿ
ಸೃಷ್ಟಿಯಲಿ ಕಲ್ಪಿಸುತ ರಕ್ಷಿಸು ಶ್ರೀ ಭ್ರಮರಾಂಬಾ ॥೧೯॥

ಕಂ|| ಮಲ್ಲಿಕಾರ್ಜುನನನ್ನು ಕೈಹಿಡಿ
ದೆಲ್ಲರನು ರಕ್ಷಿಸುವ ಜನನಿಯೆ
ಕ್ಷುಲ್ಲಕನ ಪೋಷಿಪುದಸಾಧ್ಯವೆ
ಸಲ್ಲಲಿತೆ ದರಹಸಿತೆ ಮಾತೆ ಶ್ರೀ ಭ್ರಮರಾಂಬಾ ||೨೦||

ಕಂ|| ಮಾತೆ ಶ್ರೀಜಗನ್ಮಾತೆ ಸದ್ಗುಣ
ವ್ರಾತೆ ರಕ್ಷಿಸು ರಕ್ಷಿಸೆಂದೇ
ಭೂತಲದಿ ಬೇಡುವ ಕುಮಾರನ
ಯಿೂ ತೆರದಿ ಕೈಬಿಡುವದುಚಿತವೆ ಶ್ರೀ ಭ್ರಮರಾಂಬಾ||೨೧||

ಕಂ|| ಕೋಪ ತಾಪಗಳಿಂದ ಬೆಂದೆನು
ಪಾಪಗಳ ಪಂಜರದಿ ಮುಳುಗುತ
ಪಾಪಹಾರಿಣಿ ಲೋಕ ಜನನೀ
ಕೂಪದಿಂದುದ್ಧರಿಸು ಪಾಲಿಸು ಶ್ರೀ ಭ್ರಮರಾಂಬಾ ||೨೨||

ಕಂ|| ಶಿವ ಶಿವಾ ಶಿವಯೆಂದು ನುಡಿಯುತ
ಶಿವನಭಕ್ತರ ಪೊರೆಯಲಾರದೆ
ಭವ ಭವದಿ ತೊಳಲಿಸುತ ಜರಿದರೆ
ಭವನರಾಣಿಗೆ ಕುಂದುಬಾರದೆ ಶ್ರೀ ಭ್ರಮರಾಂಬಾ ||೨೩||

ಕಂ|| ರಾಜಮಾರ್ಗವು ಬೇಕುಯೆಮ್ಮಗೆ
ರಾಜಶೇಖರರಾಣಿ ನಿನ್ನನೂ
ಮೂಜಗದಿ ಭಜಿಸುವರು ಭಕ್ತರು
ಮೂಜಗದಿ ಶ್ರೀಶೈಲ ಶ್ರೇಷ್ಠವು ಶ್ರೀ ಭ್ರಮರಾಂಬಾ ||೨೪||

ಕಂ|| ಗೌರಿಸುಮು । ನಸವಂದಿತಾರ್ಯೇ
ಭೂರಿದನುಜರ ಹರಿಸಿ ಪಾಲಿಸು
ಕಾರಣಾತ್ಮಳೆ ಶಾಂತರೂಪಿಣಿ
ವೀರಮಾರ್ಗವ ಹಿಡಿಸಿ ರಕ್ಷಿಸು ಶ್ರೀ ಭ್ರಮರಾಂಬಾ ||೨೫||

ಕಂ|| ನಿನ್ನ ನಾಮವು ಮಧುರ ಮಧುರವು
ನಿನ್ನ ಸ್ಮರಣೆಯು ನಿಖಿಲ ಪುಣ್ಯವು
ನಿನ್ನ ಧ್ಯಾನಕೆ ನಿತ್ಯಮುಕ್ತಿಯು

ನಿನ್ನ ಕಾಂಬುವನವನೆ ಸುಕೃತಿಯು
ಶ್ರೀ ಭ್ರಮರಾಂಬಾ ||೨೬||

ಕಂ|| ಕರಿಬಸವ ಸತ್ಕವಿಯು ರಚಿಸಿದ
ಪರಮ ಮಂಗಳವಾದ ಕಂದದ
ಸ್ಮರಣೆಯನು ನಿತ್ಯದಲಿ ಮಾಡ್ದಡೆ
ದುರಿಕೋಟಿಗಳುಳಿಯಲಾರವು ಉಳಿಯಲಾರವು
ಶ್ರೀ ಭ್ರಮರಾಂಬಾ ||೩೯|| ||೨೭||

## ಶ್ರೀಶೈಲ ಕ್ಷೇತ್ರದ ಪೀಠಾಧಿಕಾರಿಗಳು

ಪೂರ್ವದ ಯುಗಗಳಿಂದಲೂ ಶ್ರೀಶೈಲಕ್ಕೆ ಶ್ರೀ ಪಂಡಿತಾರಾಧ್ಯರ ಪೀಠವೇ ಪ್ರಧಾನವಾಗಿದೆಯೆಂಬ ಅಂಶವು ಭರತಖಂಡದ ಚತುರ್ದಿಕ್ಕುಗಳಲ್ಲಿಯೂ ಡಣಾಡಂಗುರವಾಗಿ ಸಾರುತ್ತದೆ. ಈ ವಿಷಯವು ಪ್ರಭುತ್ವದ ಲೆಕ್ಕಪತ್ರಗಳಲ್ಲಿಯೂ, ಸುಪ್ರಸಿದ್ಧವಾದ ಗ್ರಂಥಗಳಲ್ಲಿಯೂ ಉದಹರಿಸಲ್ಪಟ್ಟಿದೆ. ಈ ವಿಷಯವನ್ನು ಶ್ರೀಶೈಲದಲ್ಲಿ ಶ್ರೀ ವೇದವ್ಯಾಸ ಮಹರ್ಷಿಗಳು ಕೆಲವುಕಾಲ ವಿದ್ದು ಸ್ಕಾಂದಪುರಾಣದಲ್ಲಿ ಉದಹರಿಸಿದ ವಿಷಯವು ಈ ಕೆಳಗೆ ಉದಹರಿಸಿರುವೆವು.

ಶ್ಲೋ|| ತಸ್ಮಿನ್ ಶ್ರೀಪರ್ವತೇ ಪುಣ್ಯೇ ಸಂಸಾರಾ ಮಯಭೇಷಜೇ
ಅಸ್ತೆ ಲಿಂಗಾಂಗಸಂಬಂಧೀ ಸದಾನಂದಾದ್ಯವೋಮುನಾ
ಸರ್ವೋಪನಿಷದರ್ಥಜ್ಞಃ ಶಿವಧ್ಯಾನಪರಾಯಣಃ
ಭಸ್ಮಾವಲಿಪ್ತಸರ್ವಾಂಗೋ ರುದ್ರಾಧ್ಯಾಯ ಜಪಾಶ್ರಮಃ
ರುದ್ರಾಕ್ಷಮಾಲಾಭರಣೋ ಧೃತಪಾಶುಪತವ್ರತಃ
ಅತಿವರ್ಣಾಶ್ರಮೀಯೋಗೀ ಜೀವನ್ಮುಕ್ತೋ ಜಗದ್ಗುರುಃ
ತಂ ಸದಾನಂದನಾಮಾನಾಂ ಶಂಕಧ್ಯಾನಲಾಲಸಂ
ದಿರಸ್ತಕುಹಕಂವಿಪ್ರ ಸದಮತ್ರೇಣಪೂಜಯಾ
ರಹ್ಯಪ್ರಸಾದಾತ್ತೇವ್ರತ್ರೋ ಗಚ್ಛೇನ್ನಿ ರೋಗತಾಂ ಧ್ರುವಂ
ತಸ್ಮಾದುತ್ತಿಷ್ಠಗಚ್ಛತ್ವಂ ಶ್ರೀ ಪರ್ವತ ಮತಂ ಪ್ರಿತಂ
ಯೆಂದು ಬರೆದಿದೆ.

ಇದರಿಂದ ಜಗದ್ಗುರು ಸದಾನಂದ ಶಿವಾಚಾರ್ಯರೂ ದ್ವಾಪರಯುಗದಲ್ಲಿ ಶ್ರೀಶೈಲ ಧರ್ಮಪೀಠವನ್ನಲಂಕರಿಸಿದ್ದರೆಂದೂ ತಿಳಿದುಬರುತ್ತಿದೆ.

# ಶ್ರೀ ಮಲ್ಲಿಕಾರ್ಜುನ ಸುಪ್ರಭಾತವು



ಶ್ಲೋ॥ ಪ್ರಾತಸ್ಸ್ಮರಾಮಿ ಗಣನಾಥ ಬಂಧುಂ
ಸಿಂಧೂರ ಪೂರ ಪರಶೋಭಿತ ಗಂಡ ಯುಗ್ಮಂ,
ಉದ್ದಂಡ ವಿಘ್ನ ಪರಿಖಂಡನ ಚಂಡದಂಡ
ಮಾಖಂಡಲಾದಿ ಸುರನಾಯಕ ಬೃಂದವಂದ್ಯಂ ॥೧॥

ಕಲಾಭ್ಯಾಂ ಚೂಡಾಲಂಕೃತ ಶಶಿಕಲಾಭ್ಯಾಂ ನಿಜತಪಃ
ಫಲಾಭ್ಯಾಂ ಭಕ್ತೇಷು ಪ್ರಕಟಿತ ಫಲಾಭ್ಯಾಂ ಭವತು ಮೇ
ಶಿವಾಭ್ಯಾ ಮಸ್ತೋಕ ತ್ರಿಭುವನ ಶಿವಾಭ್ಯಾಂ ಹೃದಿ ಪುನ
ರ್ಭವಾಖ್ಯಾ ಮಾನಂದ ಸ್ಫುರ ದನುಭವಾಭ್ಯಾಂ ನತಿ ರಿಯಂ ॥೨॥

ನಮಸ್ತೆ ನಮಸ್ತೆ ಮಹಾದೇವ । ಶಂಭೋ ।
ನಮಸ್ತೆ ನಮಸ್ತೆ ದಯಾಪೂರ್ಣ ಸಿಂಧೋ ।
ನಮಸ್ತೆ ನಮಸ್ತೆ ಪ್ರಸನ್ನಾತ್ಮ ಬಂಧೊ ।
ನಮಸ್ತೆ ನಮಸ್ತೆ ನಮಸ್ತೆ ಮಹೇಶ । ॥೩॥

ಶಶ್ವಚ್ಛ್ರೀಗಿರಿ ಮೂರ್ಧನಿ ತ್ರಿಜಗತಾಂ ರಕ್ಷಾಕೃತಿಂ ಲಕ್ಷಿತಾಂ
ಸಾಕ್ಷಾದಕ್ಷತ ಶತ್ಕಟಾಕ್ಷಸರಣಿ ಶ್ರೀಮತ್ಸುಧಾವರ್ಷಿಣಿಮ್,
ಸೋಮಾರ್ಧಾಂಕಿತ ಮಸ್ತಕಾಂ ಪ್ರಣಮತಾಂ ನಿಸ್ಸೀಮಸಂಪತ್ಪ್ರದಾಂ
ಸುಶ್ಲೋಕಾಂ ಭ್ರಮರಾಂಬಿಕಾಂ ಸ್ಮಿತಮುಖಿಂ ಶಂಭೋಸ್ಸಖಿಂ
ತ್ವಾಂ ನಮಃ ॥೪॥

ಮಾತಃ । ಪ್ರಸೀದ, ಸದಯಾಭವ ಭವ್ಯಶಿಲೇ ।
ಲೀಲಾಲವಾಕಲಿತ ದೈತ್ಯಕುಲಾಪಹಾರೆ ।
ಶ್ರೀಚಕ್ರರಾಜನಿಲಯೆ । ಶ್ರುತಿಗೀತ ಕೀರ್ತೆ ।
ಶ್ರೀಶೈಲನಾಥದಯಿತೆ । ತವ ಸುಪ್ರಭಾತಂ ॥೫॥

ಶಂಭೋ । ಸುರೇಂದ್ರನುತ । ಶಂಕರ । ಶೂಲಪಾಣೆ ।
ಚಂದ್ರಾವತಂಸ । ಶಿವ । ಶರ್ವ । ಪಿನಾಕಪಾಣೇ ।

ಗಂಗಾಧರ । ಕ್ರತುಪತೆ । ಗರುಡಧ್ವಜಾಪ್ತ ।
ಶ್ರೀ ಮಲ್ಲಿಕಾರ್ಜುನವಿಭೊ । ತವ ಸುಪ್ರಭಾತಂ ॥೬॥
ವಿಶ್ವೇಶ । ವಿಶ್ವಜನಸೇವಿತ । ವಿಶ್ವಮೂರ್ತ್ತೆ ।
ವಿಶ್ವಂಭರ । ತ್ರಿಪುರಭೇದನ । ವಿಶ್ವಯೊನೇ ।
ಪಾಲಾಕ್ಷ । ಭವ್ಯಗುಣ । ಭೋಗಿವಿಭೂಷಣೇಶ ।
ಶ್ರೀ ಮಲ್ಲಿಕಾರ್ಜುನ ವಿಭೊ । ತವ ಸುಪ್ರಭಾತಂ ।೭॥
ಕಲ್ಯಾಣರೂಪ । ಕರುಣಾಕರ । ಕಾಲಕಂಠ ।
ಕಲ್ಪದ್ರುಮ ಪ್ರಸನಪೂಜಿತ । ಕಾಮವಾಯಿನ್ ।
ದುರ್ನ್ನೀತಿದೈತ್ಯ ದಳನೊದ್ಯತ । ದೇವದೇವ ।
ಶ್ರೀ ಮಲ್ಲಿಕಾರ್ಜುನವಿಭೊ । ತವ ಸುಪ್ರಭಾತಂ ।೮॥
ಗೌರಿ ಮನೋಹರ । ಗಣೇಶ್ವರ ಸೇವಿತಾಂಘ್ರೆ ।
ಗಂಧರ್ವ ಯಕ್ಷ ಸುರ ಕಿನ್ನರ ಗೀತ ಕೀರ್ತ್ತೇ ।
ಗಂಡಾವಲಂಬಿ ಫಣಿಕುಂಡಲ ಮಂಡಿತಾಸ್ಯ ।
ಶ್ರೀ ಮಲ್ಲಿಕಾರ್ಜುನವಿಭೋ । ತವ ಸುಪ್ರಭಾತಂ ।೯॥
ನಾಗೇಂದ್ರಭೂಷಣ । ನಿರೀಹಿತ ನಿರ್ವಿಕಾರ ।
ನಿರ್ಮ್ಮಯ । ನಿಶ್ಚಲ । ನಿರರ್ಗಲ । ನಾಗಭೇದಿನ್ ।
ನಾರಾಯಣಿಪ್ರಿಯ । ನತೇಸ್ವದ ? ನಿರ್ಮಲಾತ್ಮನೆ ।
ಶ್ರೀ ಪರ್ವತಾಧಿಪ । ವಿಭೋ । ತವ ಸುಪ್ರಭಾತಂ ॥೧೦॥
ಸೃಷ್ಟಂ ತ್ವ ಯೈವ ಜಗದೇಕ ದಶೇಷ ಮೀಶ ।
ರಕ್ತಾ ವಿಧಿಶ್ಚ ವಿಧಿಗೋಚರ । ತಾವಾಕಿನಃ,
ಸಂಹಾರಶಕ್ತಿ ರಪಿ ಶಂಕರ । ಕಿಂಕರಿ ತೇ
ಶ್ರೀಶೈಲ ಶೇಖರವಿಭೋ । ತವ ಸುಪ್ರಭಾತಂ ॥೧೧॥
ಏಕಸ್ತ್ವಮೇವ ಬಹುಧಾ ಭವ ! ಭಾಸಿಲೋಕೆ
ನಿಶ್ಶಂಕ ಧಿ । ರ್ವೃಷಭಕೇತನ । ಮಲ್ಲಿನಾಥ ।
ಶ್ರೀ ಭ್ರಾಪುರಿಪ್ರಿಯ । ಸುಖಾಶ್ರಯ । ಲೋಕನಾಥ ।
ಶ್ರೀಶೈಲ ಶೇಖರ ವಿಭೋ । ತವ ಸುಪ್ರಭಾತಂ ॥೧೨॥
ಪಾತಾಲಿಗಂಗಾ ಜಲ ಮಜ್ಜನ ನಿರ್ಮಲಾಂಗಾ :

ಭಸ್ಮತ್ರಿಪುಂಡ ಸಮಲಂಕೃತ ಫಾಲಾಭಾಗಾಃ
ಗಾಯಂತಿ ದೇವಮುನಿ ಭಕ್ತಜನಾ ಭವಂತಂ
ಶ್ರೀ ಮಲ್ಲಿಕಾರ್ಜುನ ವಿಭೋ ತವ ಸುಪ್ರಭಾತಂ ||೧೩||

ಸಾರಸ್ವತಾಂಬುಯುತ ಭೋಗವತಿ ಶ್ರಿತಾಯಾಃ
ಬ್ರಹ್ಮೇಶ ವಿಷ್ಣುಗಿರಿಚುಂಬಿತ ಕೃಷ್ಣವೇಣ್ಯಾಃ
ಸೋಪಾನಮಾರ್ಗ ಮಧಿರುಹ್ಯಾ ಭಜಂತಿ ಭಕ್ತಾಃ
ಶ್ರೀ ಮಲ್ಲಿಕಾರ್ಜುನ ವಿಭೋ । ತವ ಸುಪ್ರಭಾತಂ ||೧೪||

ಶ್ರೀ ಮಲ್ಲಿಕಾರ್ಜುನ ಮಹೇಶ್ವರ ಸುಪ್ರಭಾತ
ಸ್ತೋತ್ರಂ ಪಠಂತಿ ಭೂವಿ ಯೇ ಮನುಜಾಃ ಪ್ರಭಾತೆ
ತೇ ಸರ್ವಸೌಖ್ಯಂ ಮನುಭೂಯ ಪರಾನವಾಪ್ಯಂ
ಶ್ರೀ ಶಾಂಭವಂ ಪದಮವಾಪ್ಯ ಮುದಂ ಲಭಂತೆ ||೧೫||

ಶ್ರೀ ಮಲ್ಲಿಕಾರ್ಜುನ ಮಹೇಶ್ವರ ಸ್ವಾಮಿಯ ಸುಪ್ರಭಾತವನ್ನು ಯಾವ ಮನುಷ್ಯರೇ ಆಗಲಿ, ಪ್ರಾತಃಕಾಲದಲ್ಲಿ ಭಕ್ತಿಯಿಂದ ಪಠಿಸಿದರೆ, ಅಂಥ ವರು ಇಹಲೋಕದಲ್ಲಿ ಸರ್ವ ಸೌಖ್ಯಗಳನ್ನನುಭವಿಸಿ ದುರ್ಲಭವಾದ ಕೈಲಾಸ ಪದವಿಯುನ್ನು ಹೊಂದಿ ಪರಮಾನಂದವನ್ನು ಪಡೆಯುವರು.



ಸರ್ವಾರ್ತಿಭಂಜನ । ಸದಾಶಿವ । ದಾಸವಾರೆ ।
ಪಾರ್ಥ ಪ್ರಹಾರ ಕಲಿತೋತ್ತಮ ಮೂರ್ಧಭಾಗ ।
ಯಕ್ಷೇಶಸೇವಿತಪದಾಬ್ಜ । ವಿಭೂತಿದಾಯಿನೆ ।
ಶ್ರೀಶೈಲವಾಸ । ಚರಣಂ ಶರಣಂ ತವಾಸ್ಮಿ



# ಶ್ರೀ ಮಲ್ಲಿಕಾರ್ಜುನ ಮಂಗಳ ಶಾಸನ

ಉಮಾಕಾಂತಾಯ ಕಾಂತಾಯ ಕಾಮಿತಾರ್ಥ ಪ್ರದಾಯಿನೆ,
ಶ್ರೀ ಗಿರೀಶಾಯ ದೇವಾಯ, ಮಲ್ಲಿನಾಥಾಯ ಮಂಗಳಂ

ಉಮಾದೇವಿಯ ಪತಿಯು, ಶೋಭಾಯಮಾನನೂ, ಭಕ್ತರ ಅಭೀಷ್ಟವನ್ನು ಅನುಗ್ರಹಿಸುವವನೂ, ಶ್ರೀಪರ್ವತದ ಅಧಿಷ್ಠಾನ ದೇವನೂ ಆದ ಮಲ್ಲಿನಾಥನಿಗೆ ನಮ್ಮ ಮಂಗಳ ಶಾಸನವು.

ಸರ್ವ ಮಂಗಳರೂಪಾಯ, ಶ್ರೀನಗೇಂದ್ರ ನಿವಾಸಿನೆ
ಗಂಗಾಧರಾಯ ನಾಥಾಯ, ಶ್ರೀಗಿರಿಶಾಯ ಮಂಗಳಂ

ನಿತ್ಯಮಂಗಳ ಸ್ವರೂಪನೂ, ಶ್ರೀಪರ್ವತದಲ್ಲಿ ಸಂಸಾರ ಮಾಡಿಕೊಂಡಿರುವವನೂ, ಜಡೆಯಲ್ಲಿ ಗಂಗಾ ದೇವಿಯನ್ನು ಧರಿಸಿರುವವನೂ, ಸಮಸ್ತ ಜಗತ್ತಿನ ನಾಥನೂ ಆದ ಶ್ರೀ ಗಿರೀಶಾಯನಿಗೆ ಮಂಗಳಂ

ಸತ್ಯಾನಂದ ಸ್ವರೂಪಾಯ ನಿತ್ಯಾನಂದ ವಿಧಾಯಿನೆ,
ಸ್ತುತ್ಯಾಯ ಶ್ರುತಿ ಗಮ್ಯಾಯ ಶ್ರೀಗಿರಿಶಾಯ ಮಂಗಳಂ

ತಾನು ಸಚ್ಚಿದಾನಂದ ಸ್ವರೂಪನಾಗಿ ಜೀವಿಗಳಿಗೆ ನಿತ್ಯಾನಂದವನ್ನು ಪ್ರಸಾದಿಸಿ, ಎಲ್ಲರಿಂದ ಸ್ತುತಿಸಲ್ಪಡುವವನೂ, ವೇದವೇದ್ಯನೂ ಆದ ಮಲ್ಲಿನಾಥನಿಗೆ ನಮ್ಮ ಮಂಗಳ ಶಾಸನವು.

ಮುಕ್ತಿಪ್ರದಾಯ ಮುಖ್ಯಾಯ, ಭಕ್ತಾನುಗ್ರಹಕಾರಿಣೆ,
ಸುಂದರೇಶಾಯ ಸೌಮ್ಯಾಯ, ಶ್ರೀಗಿರಿಶಾಯ ಮಂಗಳಂ

ಮೋಕ್ಷವನ್ನು ಅನುಗ್ರಹಿಸುವನೂ, ದೇವದೇವನೂ, ಭಕ್ತರನ್ನು ಅನುಗ್ರಹಿಸುವವನೂ, ಮೋಹನಾಕಾರ ರೂಪನೂ, ಶಾಂತಿ ಸುಖಗಳನ್ನು ನೀಡುವವನೂ ಆದ ಶ್ರೀ ಗಿರೀಶ್ವರನಿಗೆ ನಮ್ಮ ಮಂಗಳ ಶಾಸನವು.

## SRISAILA DEVASTHANAM TRANSPORT TIMINGS

| | *Departure* | *Arrival* | *Fare* |
|---|---|---|---|
| 1. Kurnool to Srisailam | 5-00 A.M. | 11-15 A.M. | Rs, 10—00 |
| 2. Srisailam to Kurnool | 1-15 P.M. | 7-55 P.M. | Rs. ,, |
| 3. Mahanandi to Srisailam | 5-30 A.M. | 12-20 A.M. | Rs. 10—50 |
| 4. Srisailam to Mahanandi | 1-00 P.M. | 7-30 P.M. | ,, |
| 5. Ongole to Srisailam | 5-15 A.M. | 12-00 Noon | Rs. 10—00 |
| 6. Srisailam to Ongole | 1-15 P.M. | 7-30 P.M. | ,, |
| 7. Srisailam to Tirupathi(1stBus) | 5-00 A.M. | 4-30 ,, | Rs. 22-50 |
| 8 Tirupathi to Srisailam ,, | 5-00 ,, | 4-30 ,, | ,, |
| 9. Srisailam to Tirupathi(2ndBus) | 7-30 ,, | 7-30 ,, | ,, |
| 10. Tirupathi to Srisailam ,, | 7-30 ,, | 7-15 ,, | ,, |
| 11. Srisailam to Anantapur(1stBus) | 5-00 ,, | 5-20 ,, | Rs. 17-75 |
| 12. Anantpur to Srisailam ,, | 5-00 ,, | 4-00 ,, | ,, |
| 13. Srisailam to Anantapur(2ndBus | 4-00 P.M. | 3-00 A.M. | Rs. 18--00 |
| 14. Anantapur to Srisailam ,, | 5-15 ,, | 4-15 ,, | ,, |
| 15. Srisailam to Guntur (Day) | 7-00 A.M | 3-00 P.M. | Rs. 12--00 |
| 16. Guntur to Srisailam | 9-00 ,, | 5-00 ,, | ,, |
| 17. Srisailam to Guntur [Night] | 9-00 P.M. | 5-00 A.M. | ,, |
| 18 Guntur to Srisailam [Day] | 5-00 A.M. | 11-03 A.M. | ,, |
| 19. Srisailam to Guntur ,, | 2-00 P.M. | 8-00 P,M. | ,, |
| 20. Guntur to Srisailam [Night] | 9-00 ,, | 5-00 A.M. | ,, |
| 21. Srisailam to Chitradurg | 7-00 A.M. | 9-00 P.M. | Rs 25--50 |
| 22. Chitradurg to Srisailam | 7-00 ,, | 9-00 ,, | ,, |
| 23. Srisailam to Markapur R.S. [4 Singles] | | | Rs. 5--00 |
| 24. Srisailam to Egalapenta [3 Trips] | | | Rs. 1--50 |
| 25. Srisailam to Patalaganga | | | Rs. 1--00 |